ಹರಿದಾಸರು

ಹೊಗಳಿ ಹಾಡಿದ

# ಶ್ರೀವಾದಿರಾಜರು





# ಹ ರಿ ದಾ ಸ ರು
# ಹೊಗಳಿ ಹಾಡಿದ
# ಶ್ರೀ ವಾದಿರಾಜರು

ಸಂಪಾದಕ :
ಶ್ರೀನಿವಾಸ ಹಾವನೂರ

ಶ್ರೀ ಆನಂದತೀರ್ಥ ಪ್ರತಿಷ್ಠಾನ
( ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು )
ಮತ್ತು
ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ
( ಹಾವನೂರು, ಹಾವೇರಿ ಜಿಲ್ಲೆ )

೧೯೯೮

**Haridaasaru Hogali Haadida SHRI VAADIRAAJARU**
Ed. by Shrinivasa Havanur, Aashraya Apartments, 36, Vinayak Layout, Vijayanagar (W), Bangalore-560 040 Ph: 3384529. Published by Aanandatirtha Pratishthaana, Shri Puranaprajna Vidyapitha, Bangalore-560 050

Pages : 210

ಪ್ರಥಮ ಮುದ್ರಣ : ೧೯೯೮

ಬೆಲೆ : ರೂ. ೪೦/-



ಪ್ರಕಾಶನ :
**ಶ್ರೀ ಆನಂದತೀರ್ಥ ಪ್ರಕಾಶನ**
(ಪೂರ್ಣಪ್ರಜ್ಞ ವಿದ್ಯಾಪೀಠ)
ಬೆಂಗಳೂರು.
ಮತ್ತು
**ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ**
ಹಾವನೂರ, ಜಿ. ಹಾವೇರಿ-೫೮೧ ೧೩೩

ಮುದ್ರಣ :
**ಶ್ರೀರಂಗ ಪ್ರಿಂಟರ್ಸ್ ಮತ್ತು ಬೈಂಡರ್ಸ್**
ಶ್ರೀ ರಾಮಾಂಜನೇಯ ರಸ್ತೆ, ಹನುಮಂತನಗರ
ಬೆಂಗಳೂರು-೫೬೦ ೦೧೯
ದೂರವಾಣಿ : ೬೦೨೩೩೩

# ಪರಿವಿಡಿ

# ಶ್ರೀ ಸೋದೆ ವಾದಿರಾಜ ಮಠ, ಉಡುಪಿ

ದಿನಾಂಕ ೨೭–೨–೧೯೯೮

ಶ್ರೀಮದ್ವಾದಿರಾಜ ಪೂಜ್ಯ ಚರಣರು ಋಜುಶ್ರೇಷ್ಠ ದೇವತೆಗಳು; ಶ್ರೀಮತ್ಸರ್ವಜ್ಞಾಚಾರ್ಯರಂತೆಯೇ ಜಗತ್ತಿಗೆ ಗುರುಗಳು; ಸಜ್ಜನರ ರಕ್ಷಕರು; ಸಾಧನದ ಹಾದಿಯಲ್ಲಿ ಬರುವ ಅಡೆತಡೆಗಳನ್ನು ಅವರಿಂದ ದೂರ ಮಾಡಿ ಶ್ರೀಹರಿಯ ಪಾದಮೂಲಕ್ಕೆ ಕೊಂಡೊಯ್ಯುವವರು. ಜಗತ್ತಿಗೆ ಪರಮ ಆಪ್ತರಾದ ಈ ಸರ್ವಜ್ಞ ಶಿಖಾಮಣಿಗಳನ್ನು ಹರಿದಾಸವರ್ಯರು ತಮ್ಮ ಹೃದಯದಾಳದಿಂದ ಹಾಡಿ ಸ್ತೋತ್ರ ಮಾಡಿರುವುದರಲ್ಲಿ ಆಶ್ಚರ್ಯವಿಲ್ಲ.

ಡಾ. ಶ್ರೀನಿವಾಸ ಹಾವನೂರ ಇವರು ತುಂಬಾ ಉತ್ಸಾಹದಿಂದ, ದಾಸವರ್ಯರಿಂದ ರಚಿತವಾದ ಶ್ರೀ ಗುರುರಾಜರ ಸ್ತುತಿಗಳನ್ನು ಒಂದು ಕಡೆ ಸಂಗ್ರಹಿಸಿ ಪ್ರಕಟಿಸುವ ಪ್ರಯಾಸ ತೆಗೆದುಕೊಂಡಿದ್ದಾರೆ. ಚದುರಿ ಬಿದ್ದ ಮುತ್ತುಗಳನ್ನು ಹುಡುಕಿ ಕೆದಕಿ ತೆಗೆಯುವಂತೆ ಅವರು ದಾಸರಾಯರುಗಳ ಸ್ತೋತ್ರರತ್ನಗಳನ್ನು ಕರ್ನಾಟಕದ ಮೂಲೆ ಮೂಲೆಗೂ ತಿರುಗಿ ಸಂಗ್ರಹಿಸಿದ್ದಾರೆ. ಅವರ ಪ್ರಯತ್ನಗಳು ಈ ನಿಟ್ಟಿನಲ್ಲಿ ತುಂಬಾ ಮುಂದುವರಿದು ಒಂದು ಮೈಲಿಗಲ್ಲನ್ನೇ ಸ್ಥಾಪಿಸಿದೆ ಎಂಬುದರಲ್ಲಿ ಆಶ್ಚರ್ಯವೇನಿಲ್ಲ.

ಅವರ ಈ ಗುರುರಾಜ ನಿಷ್ಠೆಗೆ ಇನ್ನೊಂದು ಕಾರಣವೆಂದರೆ ಅವರ ಗ್ರಾಮವಾದ ಹಾವನೂರಲ್ಲಿ ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನವಿದ್ದು, ಅವರ ಬಂಧುವರ್ಗದವರೇ ಪೂಜಾದಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಶ್ರೀ ಶ್ರೀನಿವಾಸ ಹಾವನೂರರಿಗೆ ದೀರ್ಘಾಯುರಾರೋಗ್ಯ ಕೊಟ್ಟು, ಇನ್ನೂ ಇಂತಹ ಕೃತಿರತ್ನಗಳನ್ನು ಮುಂದೆ ತರುವ ಅವಕಾಶ ಕೊಡಲೆಂದು ನಾವು ಶ್ರೀ ಹರಿಗುರುಗಳಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು,

**ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರು**

## ಶ್ರೀ ಶ್ರೀ ಪೇಜಾವರ ಮಠದ ಶ್ರೀಪಾದಂಗಳವರಿಂದ

ಶ್ರೀಮನ್ಮಧ್ವಾಚಾರ್ಯರ ಅನಂತರ ಮಧ್ವಮತವನ್ನು ವಿಶೇಷವಾಗಿ ನೆಲೆಗೊಳಿಸಿದವರಲ್ಲಿ ಪರಮಪೂಜ್ಯ ಶ್ರೀ ವಾದಿರಾಜ ಗುರುಗಳ ಹೆಸರು ಎದ್ದು ಕಾಣುವಂತಹದು. ಅವರು ವಿದ್ವಜ್ಜನರಿಗೆ ಸೂಕ್ತವಾದ ಶಾಸ್ತ್ರಗ್ರಂಥಗಳನ್ನು, ಪಾಮರರಿಗೆ ಭಕ್ತಿಭಾವದ ಕೀರ್ತನೆಗಳನ್ನು ರಚಿಸಿ ಸಮಸ್ತ ಜನರಿಗೆ ಉಪಕಾರ ಮಾಡಿದ್ದಾರೆ. ಜೊತೆಗೆ ತಮ್ಮ ತಪಃಶ್ಶಕ್ತಿಯ ಬಲದಿಂದ ಆರ್ತಜನರ ಸಂಕಟವನ್ನು ಪರಿಹರಿಸಿದ್ದಾರೆ. ಈಗಲೂ ವೃಂದಾವನದಲ್ಲಿ ನಿಂತು ಭಕ್ತ ಜನತೆಯನ್ನು ಅನುಗ್ರಹಿಸುತ್ತಿದ್ದಾರೆ.

ಪ್ರಸ್ತುತ ಸಂಕಲನವು ಹಲವಾರು ದೃಷ್ಟಿಗಳಿಂದ ವೈಶಿಷ್ಟ್ಯ ಪೂರ್ಣವಾದದ್ದು. ಅನೇಕ ಜನ ಹರಿದಾಸರು ಮೊದಲ ಸಲ ಬೆಳಕಿಗೆ ಬಂದಿದ್ದಾರೆ. ಇಲ್ಲಿಯ ಹಾಡುಗಳಲ್ಲಿ ಸಾಕಷ್ಟು ವೈವಿಧ್ಯವಿದೆ. ಅನೇಕ ಹಾಡುಗಳನ್ನು ಮತ್ತೆ ಮತ್ತೆ ಓದಬೇಕು; ಹಾಡಬೇಕು - ಎಂದು ಅನ್ನಿಸುವಂತಿವೆ. ಜೊತೆಗೆ ಸಂಪಾದಕರಾದ ಶ್ರೀ ಶ್ರೀನಿವಾಸ ಹಾವನೂರರು, ಶ್ರೀ ವಾದಿರಾಜ ಗುರುಗಳ ಪ್ರಭಾವಲಯದ ಹಬ್ಬುಗೆಯನ್ನು ಕುರಿತು, ಅಭ್ಯಾಸ ಮಾಡಿ ಬರೆದ ಲೇಖವಿದೆ.

ಇಂಥ ವೈಶಿಷ್ಟ್ಯಪೂರ್ಣವಾದ ಹಾಡುಗಳ ಸಂಕಲನವನ್ನು ನಮ್ಮ ಶ್ರೀ ಆನಂದತೀರ್ಥ ಪ್ರತಿಷ್ಠಾನದ ವತಿಯಿಂದ ಪ್ರಕಟಿಸು ವುದಕ್ಕೆ ಸಂತೋಷಪಡುತ್ತೇವೆ. ಈ ಕಾರ್ಯದಲ್ಲಿ ಜೊತೆಗೂಡಿದ ಹಾವನೂರ ಗ್ರಾಮದ ಗಲಗಲಿ ಬಂಧುಗಳನ್ನು ನಾವು ಬಲ್ಲೆವು. ಅವರು ಇಂದಿಗೂ ಸೇವಾನಿರತರಾಗಿರುವ ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನಕ್ಕೆ ನಾವು ಕೆಲ ವರ್ಷಗಳ ಹಿಂದೆ ಭೆಟ್ಟಿ ಕೊಟ್ಟಿದ್ದೆವು. ಅಲ್ಲಿಯ ಪ್ರಶಾಂತ ವಾತಾವರಣವು ನಮಗೆ ಹಿಡಿಸಿತು.

ಪ್ರಸ್ತುತ ಗ್ರಂಥವು ಅನೇಕಾನೇಕ ಭಕ್ತರ ಕೈಸೇರಿ ಅವರು ಶ್ರೀ ವಾದಿರಾಜ ಗುರುಗಳ ಅನುಗ್ರಹಕ್ಕೆ ಪಾತ್ರರಾಗಲೆಂದು ಹಾರೈಸುತ್ತೇವೆ.

ಇತಿ,

ಶ್ರೀ ವಿಶ್ವೇಶತೀರ್ಥರು

## ಕೃತಜ್ಞತಾ ಸಮರ್ಪಣ

ನಮ್ಮ ಹಾವನೂರ ಗ್ರಾಮದಲ್ಲಿರುವ ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನದ ಸೇವೆಯಲ್ಲಿ ನಿರತರಾದ ನಮಗೆ, ಅವರನ್ನು ಸ್ತುತಿಸಿ ಪದರಚನೆ ಮಾಡಿದ ಹರಿದಾಸರ ಕೃತಿಗಳ ಸಂಕಲನವೊಂದನ್ನು ಹೊರತರಬೇಕೆಂದು ಪ್ರೇರಣೆಯಾಯಿತು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು ಡಾ|| ಟಿ. ಎನ್. ನಾಗರತ್ನ ಅವರ ಸಮರ್ಥ ಸಂಪಾದಕತ್ವದಲ್ಲಿ ಹೊರತಂದ, ಶ್ರೀ ವಾದಿರಾಜರೇ ರಚಿಸಿದ ಕೀರ್ತನೆಗಳ ಸಂಪುಟಗಳನ್ನು ನೋಡಿದ ಮೇಲೆ, ಅವಕ್ಕೆ ಪೂರಕವಾಗಿ ಬೇರೆಯವರು ರಚಿಸಿದ ಹಾಡುಗಳ ಸಂಕಲನವನ್ನು ತರುವುದು ಸೂಕ್ತವೆಂದು ಕಂಡಿತು.

ಈ ಸಂಕಲನದಲ್ಲಿ ಬಂದ ಹೆಚ್ಚಿನ ಹಾಡುಗಳನ್ನು ನಾನಾ ಕಡೆಗಳಲ್ಲಿಯ ಭಕ್ತರು ಬರೆದಿಟ್ಟುಕೊಂಡಿದ್ದ ನೋಟ್‌ಬುಕ್ಕುಗಳಿಂದ ಸಂಗ್ರಹಿಸಲಾಗಿದೆ. ಅಲ್ಲದೆ ಶ್ರೀ ಗೊರಾಬಾಳ ಹನುಮಂತರಾಯರು, ಸೋದೆ ಮಠದ ಮಾನ್ಯ ವ್ಯವಸ್ಥಾಪಕರು, ಡಾ. ಎ. ಪಾರ್ಥಸಾರಥಿಯವರು ಹಾಗೂ ಕಡೂರಿನ ಶ್ರೀ ಎಚ್. ಪಿ. ನಾಗರಾಜರಾಯರು ತಂತಮ್ಮ ವಾದಿರಾಜೀಯ ಗ್ರಂಥಗಳಲ್ಲಿ ಪ್ರಕಟಿಸಿದ ಹಾಡುಗಳನ್ನೂ ಬಳಸಿಕೊಂಡಿದ್ದೇವೆ. ಈ ಮಹನೀಯರುಗಳಿಗೂ, ನೋಟ್ ಪುಸ್ತಕಗಳನ್ನು ಕೊಟ್ಟವರಿಗೂ ನಮ್ಮ ಹಾರ್ದಿಕ ನಮನಗಳು.

ಹಸ್ತಪ್ರತಿ ಸಿದ್ಧವಾದ ಮೇಲೆ ಪ್ರೊ. ಜಿ. ಅಶ್ವತ್ಥ ನಾರಾಯಣರು ಹಾಗೂ ಶ್ರೀ ಅನಂತಸ್ವಾಮಿರಾವ್ ಅವರು

ಪರಿಶೀಲಿಸಿ ಸೂಕ್ತ ಸಲಹೆ ನೀಡಿದ್ದಾರೆ. ಈ ದಿಸೆಯಲ್ಲಿ ಮಹತ್ವಪೂರ್ಣ ಸಲಹೆಗಳು ವಿದ್ವಾನ್ ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಂದ ಬಂದಿವೆ. ಈ ಮೂವರ ಸಹಾಯವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಇನ್ನು ಪ್ರಕಾಶನಕ್ಕೆ ಚಾಲನೆ ಇತ್ತವರೆಂದು, ವಿದ್ವಾಂಸ-ಶ್ರೀಗಳಾದ ಡಿ. ಪ್ರಹ್ಲಾದಾಚಾರ್ಯ, ಸಗ್ರಿ ರಾಘವೇಂದ್ರಾಚಾರ್ಯ ಹಾಗೂ ವರಖೇಡಿ ಶ್ರೀನಿವಾಸಾಚಾರ್ಯ ಇವರನ್ನು ಆಭಾರಪೂರ್ವಕ ಸ್ಮರಿಸುತ್ತೇವೆ.

ಅದರಂತೆ ಹುಬ್ಬಳ್ಳಿಯ ಡಾ. ವ್ಯಾಸ ಉಚ್ಚಿಲರು, ಶಿವಮೊಗ್ಗದ ಶ್ರೀ ಕೆ. ಎಲ್. ಉಪಾಧ್ಯಾಯರು, ಹರಿಹರದ ಶ್ರೀ ಲಕ್ಷ್ಮಣರೆಡ್ಡಿ ಮೊದಲಾದವರು ನೀಡಿದ ಕೊಡುಗೈಯ ನೆರವನ್ನು ಉಲ್ಲೇಖಿಸಲು ಸಂತೋಷಿಸುತ್ತೇವೆ.

ಮುಖಪುಟದ ಚಿತ್ರ ಎಷ್ಟೊಂದು ಭಾವಗರ್ಭಿತವೂ ಅರ್ಥಪೂರ್ಣವೂ ಆಗಿದೆ! ಅದರ ಶ್ರೇಯಸ್ಸೆಲ್ಲ ನಮ್ಮ ಆತ್ಮೀಯ ಕೆ. ಎಂ. ಶೇಷಗಿರಿಯವರಿಗೆ ಸಲ್ಲಬೇಕು. ಮುದ್ರಣ ವಿನ್ಯಾಸವೂ ಮೆಚ್ಚತಕ್ಕಂತಹದೇ ಆಗಿದೆ. ಶ್ರೀರಂಗ ಪ್ರಿಂಟರ್ಸ್ ಮತ್ತು ಬೈಂಡರ್ಸ್‌ನ ಮಾಲೀಕರಾದ ಶ್ರೀ ಬಾಲಕೃಷ್ಣರವರಿಗೆ ಹಾಗೂ ಗೋಪಾಲಕೃಷ್ಣರಿಗೆ ನಮ್ಮ ಕೃತಜ್ಞತೆ ಸಲ್ಲಿಸುತ್ತೇವೆ.

ಹಾವನೂರ,
(ಹಾವೇರಿ ಜಿಲ್ಲೆ) —ಗಲಗಲಿ ಬಂಧುಗಳು

**ವಿಶೇಷ ಕೃತಜ್ಞತೆಗಳು :** ತಮ್ಮ ಆಶೀರ್ವಚನ ನೀಡಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿದ ಉಭಯ ಶ್ರೀಗಳವರಿಗೆ ನಮ್ಮ ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

# ಪ್ರಸ್ತಾವನೆ

## (ಈ ಸಂಕಲನವನ್ನು ಕುರಿತು)

ಮಾಧ್ವ ಜನತೆಗೆ ಸೋದೆಯ ಶ್ರೀ ವಾದಿರಾಜರು ಮತ್ತು ಮಂತ್ರಾಲಯದ ಶ್ರೀ ರಾಘವೇಂದ್ರರು ಎರಡು ಕಣ್ಣುಗಳಿದ್ದ ಹಾಗೆ. ಇವರಂತೆಯೇ ಮಹಿಮಾನ್ವಿತರಾದ ಯತಿವರೇಣ್ಯರು ನಮ್ಮ ಪರಂಪರೆಯಲ್ಲಿ ಆಗಿಹೋದವರಿದ್ದಾರೆ. ಆದಾಗ್ಯೂ ಸಾಮಾನ್ಯ ಮಾಧ್ವರು ಹೆಚ್ಚಾಗಿ ಆತ್ಮಸಾತ್ ಮಾಡಿಕೊಂಡವರೆಂದರೆ ಇವರಿಬ್ಬರು ಯತಿಶ್ರೇಷ್ಠರು. ಅವರ ಮೂಲ ವೃಂದಾವನ ಸ್ಥಳಗಳೆರಡೂ ಉತ್ತರ ಭಾಗದ ಕರ್ನಾಟಕದಲ್ಲೇ ಇವೆ. ಹೀಗಾಗಿ ಆ ಕಡೆಯ ಆಸ್ತಿಕರು ಬೇಕೆನಿಸಿದಾಗೆಲ್ಲ ಸೋದೆ, ಮಂತ್ರಾಲಯಗಳಿಗೆ ಹೋಗುತ್ತಿದ್ದದ್ದು ತಿಳಿದದ್ದೇ.

ಈ ಮಾತು ಅನೇಕ ಹರಿದಾಸರಿಗೂ ಅನ್ವಯಿಸುತ್ತದೆ. ಹಾಗೆ ಹೋದಾಗೊಮ್ಮೆ ಈ ಯತಿದ್ವಯರನ್ನು ಮನದುಂಬಿ ಹೊಗಳಿ ಹಾಡಿದ್ದಾರೆ. ತಂತಮ್ಮ ಸ್ಥಳಗಳಲ್ಲಿ ಇದ್ದಾಗಲೂ ಅವರ ಭಕ್ತಿಭಾವ ಉಕ್ಕಿ ಹರಿದಿದೆ. ಅಂತೂ ಇವರಿಬ್ಬರ ಬಗ್ಗೆ ನೂರಾರು ಹಾಡುಗಳು ಲಭ್ಯವಿವೆ. ಸಾವಿರಾರು ಜನ ಭಕ್ತರು ಅವನ್ನು ಸಂದರ್ಭ ಒದಗಿದಾಗೆಲ್ಲ ಹಾಡುತ್ತಲಿದ್ದಾರೆ.

ಶ್ರೀ ವಾದಿರಾಜರನ್ನು ಸ್ತುತಿಸಿ ನಲಿದ ಕೆಲವು ಹರಿದಾಸರ ಹಾಡುಗಳನ್ನು ಈ ಮೊದಲ ಪ್ರಕಟಿಸಿದವರಲ್ಲಿ ಗೊರಾಬಾಳು ಹನುಮಂತರಾಯರು ಮೊದಲಿಗರು. ಮುರಗೋಡ ಕೃಷ್ಣದಾಸರೂ ಇಂಥ ಒಂದು ಕಿರುಸಂಗ್ರಹವನ್ನು ಹೊರತಂದಿದ್ದಾರೆ. ಸೋದೆಯ ಮಠದವರದೇ ಸಂಕಲನ

ವೊಂದಿದೆ. ಇತರ ಕೆಲವರು ಅವನ್ನು ಮತ್ತು ತಮಗೆ ದೊರೆತ ಕೆಲವನ್ನು ಸೇರಿಸಿ, ತಮ್ಮ ವಾದಿರಾಜೀಯ ಪುಸ್ತಕಗಳಲ್ಲಿ ಮರುಮುದ್ರಿಸಿದ್ದಾರೆ. ಮೈಸೂರಿನ ಗುರುಗೋಪಿಂದ ವಿಠಲರು ಅದರಂತೆ ಉಡುಪಿಯ ಗಿರಿಬಾಲೆ ಅವರೂ ಸ್ವಯಂ ರಚಿಸಿದ ಹಾಡುಗಳು ದೊಡ್ಡ ಸಂಖ್ಯೆಯಲ್ಲಿವೆ.

ಸಮಗ್ರ ದಾಸವಾಙ್ಮಯ ಪ್ರಕಟನ ಯೋಜನೆಯ ಕಾರ್ಯವಾಹಕ ಸಂಪಾದಕನಾಗಿ ನಾನು ಕೀರ್ತನೆಗಳ ಹಸ್ತಪ್ರತಿ ಸಂಗ್ರಹಕ್ಕೆ ತೊಡಗಿದಾಗ, ಅಲ್ಲಲ್ಲಿಯ ಕೈಬರಹದ ಪ್ರತಿಗಳಲ್ಲಿ, ನೋಟ್‌ಬುಕ್ಕುಗಳಲ್ಲಿ ಇಂಥ ಇನ್ನಷ್ಟು ಹಾಡುಗಳು ಕಣ್ಣಿಗೆ ಬಿದ್ದಾಗ ಅವನ್ನೆಲ್ಲ ಸಂಗ್ರಹಿಸಿ ವಿಧ್ಯುಕ್ತವಾಗಿ ಸಂಪಾದಿಸಿ, ಒಂದೆಡೆ ಕೊಡಬಹುದೆಂದು ತೋಚಿತು. ಮುದ್ರಿತ ಹಾಗೂ ಹಸ್ತಪ್ರತಿಯಲ್ಲಿಯ ಒಟ್ಟಿನ ಹಾಡುಗಳ ಸಂಖ್ಯೆ ೨೦೦! ಇನ್ನೂ ಕೆಲವು ಅಜ್ಞಾತವಾಗಿ ಇದ್ದಿರಲು ಸಾಕು. ಏನೇ ಇದ್ದರೂ, ಈ ದೊರೆತ ಎಲ್ಲ ಹಾಡುಗಳನ್ನು ಪರಿಶೀಲಿಸಿದಾಗ, ಕೆಲವು ಅಪೂರ್ಣವಾಗಿದ್ದುದು, ಇನ್ನು ಕೆಲವುಗಳ ಪದಬಂಧ ತೀರ ಅಸಮರ್ಪಕವಾಗಿದ್ದುದು, ಮತ್ತೆ ಕೆಲವು ಹಿಂದಿನವರು ಹೇಳಿದ್ದರ ಪುನರಾವೃತ್ತಿಯಾಗಿದ್ದುದು ಕಂಡುಬಂದಿತು. ಅಂಥವುಗಳನ್ನು ಸದ್ಯಕ್ಕೆ ಕೈಬಿಟ್ಟು, ಅರ್ಥಪೂರ್ಣವೂ ಗೇಯಸುಭಗವೂ ಆಗಿರುವವುಗಳನ್ನು ಈ ಸಂಗ್ರಹದಲ್ಲಿ ಕೊಡಮಾಡಿದೆ. ಇಲ್ಲಿರುವ ನೂರಿಪ್ಪತ್ತು ಹಾಡುಗಳಲ್ಲಿ ಹೆಚ್ಚಿನವು ಮೊದಲ ಬಾರಿಗೆ ಬೆಳಕು ಕಂಡಿವೆ.

ಶ್ರೀ ವಾದಿರಾಜರನ್ನು ಮೊತ್ತಮೊದಲು ಪ್ರಸ್ತಾಪಿಸಿದ ಹರಿದಾಸರೆಂದರೆ ಅವರ ಸಮಕಾಲೀನರಾದ ವೈಕುಂಠದಾಸರು. ಬೇಲೂರ ಚೆನ್ನಕೇಶವನ ದರ್ಶನಕ್ಕೆ ಶ್ರೀ ವಾದಿರಾಜರು ಹೋದಾಗ ಅಲ್ಲಿದ್ದ ವೈಕುಂಠದಾಸರನ್ನು ಭೆಟ್ಟಿಯಾದರು. ಆಗ ದಾಸರ ತೊಡೆಯ ಮೇಲೆ ಕೇಶವಸ್ವಾಮಿ ಮಲಗಿದ್ದುದನ್ನು ಕಂಡು ವಾದಿರಾಜರು "ಇದೇನು ನಿಮ್ಮ ಲೀಲೆ?" ಎಂದು ಕೇಳಿದರಂತೆ. ಅದಕ್ಕೆ ಉತ್ತರವಾಗಿ ವೈಕುಂಠದಾಸರು–

“ಮಗುವು ಕಾಣಯ್ಯ ಮಾಯದ ಮಗುವು ಕಾಣಯ್ಯ
ಸುಗುಣ ವಾದಿರಾಜಾ ಸಕಳಾ ಜಗವನುರದದೊಳಿಂಬಿಟ್ಟ....”

ಎಂದು ಹೇಳಿದರಂತೆ. ಇದೇ ದಾಸರ ‘ಎಂಜಲೆನ್ನಲಿಬಹುದೆ ಮನುಜರಿವನಾ’ ಎಂಬ ಹಾಡಿನಲ್ಲಿಯೂ ಶ್ರೀ ವಾದಿರಾಜರ ಪರೋಕ್ಷ ಪ್ರಸ್ತಾಪವಿದೆ.

‘ಪುರಂದರದಾಸರೂ ಶ್ರೀ ವಾದಿರಾಜರನ್ನು ಹೊಗಳಿ ಕೀರ್ತನೆ ರಚಿಸಿದ್ದಾರೆ’–ಎಂಬುದಾಗಿ ‘ಕಂಡೆ ಕಂಡೆ ರಾಜರ ಕಂಡೆ’ ಎಂಬುದನ್ನು ಈ ಹಿಂದಿನ ಸಂಗ್ರಹಗಳಲ್ಲಿ ಕೊಟ್ಟಿದೆ. ಆದರೆ ಅದು ‘ನಿಜಪುರಂದರ ವಿಠ್ಠಲೇಶ’ರೆಂಬ ಅಂಕಿತದವರದು. ದಾಸಶ್ರೇಷ್ಠರಾದ ಕನಕ–ಪುರಂದರರು ಶ್ರೀ ವಾದಿರಾಜರ ನಿಕಟ ಒಡನಾಟ ಇದ್ದವರೇ. ಆದರೂ ಅವರ ಹಾಡುಗಳು ಲಭ್ಯವಿಲ್ಲ.

**ಹಾಡುಗಳ ವರ್ಗೀಕರಣ**

ಇಲ್ಲಿಯ ಹಾಡುಗಳನ್ನು ತಾರತಮ್ಯಾನುಸಾರ ಹೊಂದಿಸಿದ್ದನ್ನು ಗಮನಿಸಬೇಕು. ಮೊದಲಿಗೆ ವಾದಿರಾಜರ ಉಪಾಸ್ಯ ದೇವತೆಗಳಾದ ಹಯಗ್ರೀವದೇವರು, ತ್ರಿವಿಕ್ರಮದೇವರುಗಳನ್ನು ಕುರಿತು ಬೇರೆ ದಾಸರುಗಳೇ ರಚಿಸಿದ ಸ್ತುತಿಗಳಿವೆ. ಅದರಂತೆ ಸೋದಾಕ್ಷೇತ್ರದ ಮಹಿಮೆಯ ಒಂದು ಹಾಡೂ ಇಲ್ಲಿ ಪ್ರಸ್ತುತವಾಗುತ್ತದೆ. ಇನ್ನೊಂದು ದೀರ್ಘವಾದ ಹಾಡಿನಲ್ಲಿ ಶ್ರೀ ವಾದಿರಾಜರ ಸಮಗ್ರ ಜೀವನದ ಇತಿವೃತ್ತವೇ ಮೂಡಿ ಬಂದಿದೆ. ಆದ್ದರಿಂದ ಅದನ್ನೂ ಇಲ್ಲಿ ಪವಣಿಸಲಾಗಿದೆ. ಅದೇಕೊ ಆ ಹಾಡಿನ ಕೊನೆಗೆ ಅಂಕಿತವಿಲ್ಲ. ಅದರಿಂದಾಗಿ ಆ ಸೊಗಸಾದ ಹಾಡಿನ ರಚಯಿತರಾರೆಂಬುದು ತಿಳಿದುಬಂದಿಲ್ಲ. ಶ್ರೀ ವಾದಿರಾಜರು ಜನ್ಮತಳೆದಾಗ ದೇವತೆಗಳು ಪ್ರತ್ಯಕ್ಷರಾಗಿ “ಬಾಳು ಬಾಳು ಹರಿಪೂಜಾಲೋಲುಪನೇ” ಎಂದು ಮುಂತಾಗಿ ಹರಸಿದರಂತೆ. ಈ ಅಂಶವನ್ನು ಅವರೇ ತಮ್ಮೊಂದು ಕೀರ್ತನೆಯಲ್ಲಿ ನಿವೇದಿಸಿದ್ದಾರೆ. ಆ ಹಾಡು ಕೂಡ ಇಲ್ಲಿ ಸೇರ್ಪಡೆಯಾಗಿದೆ.

ಹಲವು ಜನ ಯತಿಗಳೇ ಶ್ರೀ ವಾದಿರಾಜರನ್ನು ಸ್ತುತಿಸಿದ್ದಾರೆ. ಅವರಲ್ಲಿ ಸೋದೆ ಮಠದವರೇ ಆದ ಶ್ರೀ ವಿಶ್ವೇಂದ್ರತೀರ್ಥರದು ಎದ್ದುಕಾಣುವ ಹೆಸರು. (ಈಗಿನ ಶ್ರೀಗಳು ಅವರ 'ಕರಕಮಲಸಂಜಾತ'ರು). ಬೇರೆ ಮಠಗಳ ಎಂದರೆ ಸಾಗರಕಟ್ಟೆ ಪ್ರದ್ಯುಮ್ನತೀರ್ಥರದೂ ಒಂದು ಹಾಡು ನಮಗೆ ದೊರೆತಿದೆ. ಇತ್ತ ಸಂಸ್ಕೃತದಲ್ಲಿ ಶ್ರೀ ವಾದಿರಾಜರನ್ನು ನಮಿಸಿದ ಶ್ರೀ ಸತ್ಯಧರ್ಮರು (ಉತ್ತರಾದಿ ಮಠ), ಶ್ರೀ ಸುಧೀಂದ್ರರು (ಶ್ರೀರಾಘವೇಂದ್ರರಿಗೆ ಗುರುಸ್ವರೂಪರು)- ಇವರ ಶ್ಲೋಕಗಳನ್ನೂ ಅನುಬಂಧದಲ್ಲಿ ಕೊಟ್ಟಿದೆ.

ಶ್ರೀ ವಾದಿರಾಜರನ್ನು ಸ್ತುತಿಸಿದವರಲ್ಲಿ ಕಾಲಮಾನದಿಂದ ಪ್ರಸನ್ನವೆಂಕಟದಾಸರು ಮೊದಲಿಗರಾಗಿ ತೋರಬಹುದು. ಆದರೆ ಉತ್ತರ ಭಾಗದ ಕರ್ನಾಟಕದಲ್ಲಿ ಶ್ರೀ ವಾದಿರಾಜರ ಖ್ಯಾತಿಯನ್ನು ಹಾಡುಗಳ ಮೂಲಕ ಹರಡಿದವರೆಂದರೆ ಪ್ರಸನ್ನವೆಂಕಟದಾಸರ ಸಮಕಾಲೀನರೇ ಆದ ಶ್ರೀ ವಿಜಯ ದಾಸರು. ಅನಂತರ ಅವರ ಶಿಷ್ಯ ಪ್ರಶಿಷ್ಯರಾದ ಗೋಪಾಲ ದಾಸರು, ಜಗನ್ನಾಥದಾಸರು, ವೇಣುಗೋಪಾಲದಾಸರು, ಬಾದರಾಯಣವಿಠಲರು, ಅಭಿನವ ಜನಾರ್ಧನವಿಠಲರು, ಶ್ರೀದವಿಠಲರು, ಗುರುಜಗನ್ನಾಥವಿಠಲರು ಹಾಗೂ ಇನ್ನು ಕೆಲವರು, ಶ್ರೀ ವಾದಿರಾಜರನ್ನು ಸಂತತವಾಗಿ ಹೊಗಳಿ ಹಾಡಿದ್ದಾರೆ. ಇವರಲ್ಲಿ ಹೆಚ್ಚಿನವರು ಅಪರೋಕ್ಷ ಜ್ಞಾನಿಗಳೆಂಬು ದನ್ನು ನೆನೆದಿರಬೇಕು. ಗಮನಿಸಬೇಕಾದ ಸಂಗತಿಯೆಂದರೆ ಇವರೆಲ್ಲ, ವಿಜಯದಾಸರು ನಂಬಿ ನುಡಿದ ಪ್ರಕಾರ ಶ್ರೀ ವಾದಿರಾಜರು ಭಾವಿಸಮೀರರೆಂಬುದನ್ನು ಹಲವು ಬಾರಿ ಪ್ರಸ್ತಾಪಿಸಿದ್ದಾರೆ. ಶ್ರೀ ವಾದಿರಾಜರ ಋಜುತ್ವ ವಿಚಾರದಲ್ಲಿ "ಹೊಡಿ ನಗಾರಿಮೇಲೆ ಕಡಕಡ" ಎಂಬಷ್ಟು ದೃಢ ನಿಶ್ಚಯ ಅವರದು. ವಿಶೇಷವೆಂದರೆ ವಿಜಯದಾಸರ ಪ್ರಶಿಷ್ಯರ ಶಿಷ್ಯರು ಎಂದರೆ ಇಪ್ಪತ್ತನೆಯ ಶತಮಾನದವರು ಸಹ ತಮ್ಮ ಹಾಡುಗಳಲ್ಲಿ ಈ ಭಾವಿಸಮೀರತ್ವವನ್ನು ಅಬಾಧಿತ

ಸತ್ಯವೆಂಬಂತೆ ಋಜುಗಣ, ಲಾತವ್ಯ ಪದವಿ ಮುಂತಾದವನ್ನು ಮತ್ತೆ ಮತ್ತೆ ತಂದಿದ್ದಾರೆ.

ಹಿರಿಯ ತಲೆಮಾರಿನ ದಾಸರ ವಿಷಯ ಬಹುಮಟ್ಟಿಗೆ ಪರಿಚಿತವಾದದ್ದೇ. ಅವರಲ್ಲಿ ಅಭಿನವಜನಾರ್ದನ ವಿಠಲರ ಬಗ್ಗೆ ಇಲ್ಲಿ ತುಸು ಹೇಳಬೇಕು. ಸೋಮಪುರದ ಪ್ರೇಮದಾಸ ರೆಂದೂ ಅವರ ಖ್ಯಾತಿ. ಅವರು ಶ್ರೀರಾಘವೇಂದ್ರರನ್ನೂ ಬಹುವಾಗಿ ಮಾನಿಸುತ್ತಿದ್ದರು. ಅವರು ರಚಿಸಿದ 'ತುಂಗಾತೀರದಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯ' ಎಂಬ ಹಾಡು ಅತ್ಯಂತ ಜನಪ್ರಿಯವಾದದ್ದು. ಅದೇ ಧಾಟಿಯನ್ನೆತ್ತಿಕೊಂಡು ಶ್ರೀ ವಾದಿರಾಜರನ್ನು ಕುರಿತು ಕೆಲವರು ಹಾಡಿದ್ದಾರೆ.

ಕಾಲಾನುಕ್ರಮವನ್ನು ಇಟ್ಟುಕೊಂಡೇ (ಎಂದರೆ ೧೯ನೆಯ ಶತಮಾನದವರು, ಇಪ್ಪತ್ತನೆಯ ಶತಮಾನದವರು) ಮುಂದಿನ ಹಾಡುಗಳನ್ನು ಇಲ್ಲಿ ಕೊಟ್ಟಿದೆ. ಅವರಿಂದ ತಿಳಿದುಬರುವ ಅಂಶವೆಂದರೆ ಈ ಹರಿದಾಸ-ಭಕ್ತರ ಸಂಖ್ಯೆ ಹೆಚ್ಚಾಗುತ್ತ ನಡೆದದ್ದು. ೧೭-೧೮ನೆಯ ಶತಮಾನಗಳಲ್ಲಿ ಆ ಸಂಖ್ಯೆ ೨೮ ಇದ್ದರೆ, ೧೯ನೆಯ ಶತಮಾನದಲ್ಲಿ ೩೦; ಹಾಗೂ ೨೦ನೆಯ ಶತಮಾನದಲ್ಲಿ ೬೦. ಇದು ಸಂಖ್ಯಾಮಾನದ ಹೆಚ್ಚಳ ಮಾತ್ರ. ಭಾವಗರ್ಭಿತತೆ, ಪದಸೌಷ್ಟವ, ಈ ದೃಷ್ಟಿ ಯಿಂದ ನೋಡಿದರೆ ಹಿರಿಯ ತಲೆಮಾರಿನವರ ಹಾಡುಗಳು ಅದೆಷ್ಟೋ ಮೇಲು ಎನಿಸುತ್ತದೆ.

ಈಚಿನವರ ಕೃತಿ ರಚನೆಯಲ್ಲಿಯೂ ಮೌಲಿಕವಾದ ಕೆಲವು ಹಾಡುಗಳು ಇದ್ದೇ ಇವೆ. ಉದಾಹರಣೆಗೆ ಗುರುಗೋವಿಂದ ವಿಠಲ, ತಂದೆ ವೆಂಕಟೇಶ ವಿಠಲ, ಫಣಿಶಾಯಿ ವಿಠಲ-ಇವರ ಕೃತಿಗಳು. ಏನಿದ್ದರೂ ವಾದಿರಾಜ ಸ್ತುತಿಗವನದ ಪರಂಪರೆಯು ಇಂದಿಗೂ ಮುಂದುವರಿದಿದೆ. 'ಇಂದಿಗೂ' ಎಂದು ಹೇಳುವುದಕ್ಕೆ ಒಂದು ನಿದರ್ಶನ ಕೊಡಬಹುದು. ಶ್ರೀ ಅನಂತಸ್ವಾಮಿರಾವ್ ಎನ್ನುವ ದಾಸಭಕ್ತ ಮಿತ್ರರಿಗೆ ಈ ಹಸ್ತಪ್ರತಿಯನ್ನು ಪರಿಶೀಲನೆಗೆಂದು ಕೊಟ್ಟಾಗ

ತಾವು 'ಅನಂತವಿಠಲ' ಎಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದ್ದಾಗಿಯೂ, ಅವುಗಳಲ್ಲಿ ಎರಡು ಶ್ರೀ ವಾದಿರಾಜ ಗುರುಗಳನ್ನು ಕುರಿತು ಇರುವು ದಾಗಿಯೂ ಹೇಳಿದರು. ಅವನ್ನು ಇಲ್ಲಿ ಸೇರಿಸಿಕೊಂಡಿದೆ.

**ಕೆಲವು ವಿಶಿಷ್ಟ ರಚನೆಗಳು**

ಹರಿದಾಸರ ಹಾಡುಗಳೆಂದರೆ ಪಲ್ಲವಿ, ಅನುಪಲ್ಲವಿ, ಅನಂತರ ೩, ೫, ೯..... ಈ ರೀತಿಯ ವಿಷಮ ಸಂಖ್ಯೆಯ ನುಡಿಗಳಿರುವ ಪದ್ಯಗಳು. ಈ ಬಗೆಯನ್ನುಳಿದು 'ದಂಡಕ' ಪದ್ಯ ಪ್ರಕಾರದ ಹಾಡುಗಳನ್ನೂ ಹರಿದಾಸರು ರಚಿಸಿದ್ದಾರಷ್ಟೆ. ಶ್ರೀ ವಾದಿರಾಜರನ್ನು ಕುರಿತು ಇಂಥವೂ ಕೆಲವಿವೆ. ದಂಡಕ-ದಲ್ಲಿ ಸಾಲು, ಇಲ್ಲವೆ ನುಡಿಗಳ ಮಿತಿ–ಇರುವುದಿಲ್ಲ. ಅಂತ್ಯ ಪ್ರಾಸ ಇರುತ್ತದೆ. ವಿಶೇಷತಃ ಇಲ್ಲಿಯ ಹಾಡುಗಳಲ್ಲಿ 'ವಾದಿರಾಜ' 'ಗುರುರಾಜ' 'ವೃಂದಾವನ' ಇಂಥ ಶಬ್ದ ಕೊನೆ ಯಲ್ಲಿ ತಪ್ಪದೇ ಬರುವುದರಿಂದ ಭಜನೆ ಮಾಡುವ ದೃಷ್ಟಿ ಯಿಂದ ಅನುಕೂಲವಾದವುಗಳು. ಅವನ್ನು ಸಾಮೂಹಿಕವಾಗಿ ಹೇಳಿದರೆ ಇನ್ನಷ್ಟು ಫಲಪ್ರದವೆನಿಸಬಹುದು.

ಮಂಗಳಾನ್ವಿತ ಪದ್ಯಗಳೂ ಒಂದು ವಿಶೇಷ ರೀತಿಯವೇ. ಹೆಣ್ಣುಮಕ್ಕಳು ಆರತಿ ಮಾಡುವಾಗ ಅವನ್ನು ಹೇಳುವುದಕ್ಕೆ ಅನುಕೂಲವಾಗಲೆಂದು ಪ್ರತ್ಯೇಕವಾಗಿ ಕೊಟ್ಟಿದೆ.

ಭೂತರಾಜರು! ಅವರಿಲ್ಲದೆ ಗುರುಕೃಪೆಯೆಂಬುದಿಲ್ಲ. ನಮ್ಮ ಹಾಡುಗಳ ಹುಡುಕಾಟದಲ್ಲಿ ಭೂತರಾಜ ಸ್ತುತಿಪರ ಹಾಡುಗಳು ಕೆಲವು ದೊರೆತದ್ದರಿಂದ ಅವನ್ನೂ ಪ್ರತ್ಯೇಕವಾಗಿ ಕೊಟ್ಟಿದೆ.

ಇಲ್ಲಿ ಕೊಟ್ಟಿರುವ ಐವತ್ತು ಹರಿದಾಸರ ನೂರಿಪ್ಪತ್ತು ಹಾಡುಗಳಲ್ಲಿ ನಾಲ್ವರು ಮಹಿಳೆಯರಿದ್ದಾರೆ. ಅವರಲ್ಲಿ ಹರಪನಹಳ್ಳಿ ಭೀಮವ್ವ ('ಭೀಮೇಶ ಕೃಷ್ಣ') ಮೊದಲಿಗರು. 'ಕಾಳಿಮರ್ದನಕೃಷ್ಣ' ಮುದ್ರಿಕೆಯ ಕಳಸದ ಸುಂದರಮ್ಮ,

'ಪ್ರೇಮಕೃಷ್ಣ' ಮುದ್ರಿಕೆಯವರು ಹಾಗೂ 'ಶ್ರೀಮುದ್ದುವಿಠಲ' ಅಂಕಿತದ ಪಡಸಲಗಿ ರುಕ್ಮಿಣಿಬಾಯಿ–ಇವರುಗಳ ರಚನೆಗಳಲ್ಲಿ ಭಕ್ತಿಭಾವವೇ ಮುಖ್ಯವಾಗಿದೆ. ಹಾಂ! ಓರ್ವ ವೀರಶೈವ ದಾಸರೂ ಇದ್ದಾರೆ! ಅವರೇ ಬಾಳೆಹಳ್ಳಿ ರುದ್ರಾಕ್ಷಿ ಒಡೆಯರು. ಇವರ ಹಾಡನ್ನು ಮೊದಲಿಗೆ ಕೊಟ್ಟವರು ಗೊರಾಬಾಳರು. ಅದೆಲ್ಲಿಂದ ದೊರಕಿಸಿದರೋ! ಈ ರುದ್ರಾಕ್ಷಿ ಒಡೆಯರು ಯಾವ ಕಾಲದವರು? ಅವರಿಗೆ ಶ್ರೀ ವಾದಿರಾಜರ ಪ್ರಸ್ತಾವ ಬಂದದ್ದು ಹೇಗೆ? ಎಂಬುದು ಸೋಜಿಗದ ಅಂಶವೇ ಆಗಿದೆ.

**ಹಾಡುಗಳ ಸ್ಥೂಲಾವಲೋಕನ**

ಈ ಎಲ್ಲ ಹಾಡುಗಳ ಏಕಮೇವ ವಿಷಯವೆಂದರೆ ಶ್ರೀ ವಾದಿರಾಜರ ಮಹಿಮೆಯ ವರ್ಣನೆ. ಎಲ್ಲ ದಾಸರಿಗೆ ಶ್ರೀ ವಾದಿರಾಜರ ಜೀವನ ಚರಿತೆಯ ಬಗ್ಗೆ ಖಚಿತವಾದ ತಿಳಿವಳಿಕೆ ಇದೆ. ಅವರುಗಳು ತಮ್ಮ ಹಾಡುಗಳಲ್ಲಿ ಕಂಡರಿಸಿದ ಜೀವನ ಘಟನೆಗಳನ್ನು ಹೀಗೆ ಪಟ್ಟಿ ಮಾಡಬಹುದು:

- ಹೂವಿನಕೆರೆ ಗ್ರಾಮದ ರಾಮಾಚಾರ್ಯ, ಗೌರಿ ದಂಪತಿಗಳಿಗೆ ಮಗನಾಗಿ ಮನೆಯ ಹೊರಗಡೆ ಅವತರಿಸಿದುದು. ಆ ಪ್ರಯುಕ್ತ ಮಗುವನ್ನು ಉಪನಯನ ವಾದೊಡನೆ ವಾಗೀಶತೀರ್ಥರಿಗೆ ಒಪ್ಪಿಸಿಕೊಟ್ಟದ್ದು.
- ಭೂವರಾಹನು, ಶ್ರೀ ವಾದಿರಾಜತೀರ್ಥರಾದದ್ದು.
- ಸಂಚಾರತ್ವೇನ ತಿರುಪತಿಗೆ ಬಂದು, ಮಂಡಿಯಿಂದಲೇ ಬೆಟ್ಟವೇರಿದುದು. ಗಂಡಕೀ ನದಿಯಿಂದ ತಂದಿದ್ದ ಸಾಲಿಗ್ರಾಮಗಳ ಹಾರವನ್ನು ಶ್ರೀನಿವಾಸ ದೇವರಿಗೆ ಅರ್ಪಿಸಿದ್ದು.
- ತಾಯಿಯು ಹೊತ್ತಿದ್ದ ಲಕ್ಷಾಭರಣವನ್ನು ಪೂರೈಸಿದ್ದು.
- ವಿಜಯನಗರದ ಅರಸು ವೆಂಕಟಪತಿ ರಾಜನು 'ಪ್ರಸಂಗಾಭರಣತೀರ್ಥ' ಎಂಬ ಬಿರುದನ್ನಿತ್ತು ಸನ್ಮಾನಿಸಿ ದುದು.

- ಪುಣೆಯಲ್ಲಿದ್ದಾಗ 'ರುಕ್ಮಿಣೀಶ ವಿಜಯ'ವನ್ನು ರಚಿಸಿ, ಮಾಘಕಾವ್ಯಕ್ಕಿಂತಲೂ ಶ್ರೇಷ್ಠವೆಂಬುದನ್ನು ಮನಗಾಣಿಸಿ, ಆನೆಯ ಮೇಲೆ ತಮ್ಮ ಕೃತಿಯ ಮೆರವಣಿಗೆ ಮಾಡಿಸಿದ್ದುದು.
- ಉಡುಪಿಯ ಪರ್ಯಾಯವನ್ನು ಎರಡು ತಿಂಗಳಿನಿಂದ ಎರಡು ವರ್ಷಕ್ಕೆ ಬದಲಿಸಿದ್ದು.
- 'ಲಕ್ಷ್ಮೀಶೋಭಾನ' ಹಾಡಿನಿಂದ ಹಾವು ಕಚ್ಚಿದ ಮದುಮಗನನ್ನು ಬದುಕಿಸಿದ್ದು.
- ಸೊನಗಾರನೊಬ್ಬ ಗಣಪತಿ ಪ್ರತಿಮೆ ಮಾಡಹೊರಟು, ಹಯಮುಖನಾದ ಆ ಮೂರ್ತಿಯ ನಿಮಿತ್ತ ಇಡೀ ಅಕ್ಕಸಾಲಿಗ ಪಂಗಡವನ್ನು ವೈಷ್ಣವ ಧರ್ಮದವರನ್ನಾಗಿ ಮಾಡಿದುದು.
- ಜಗನ್ನಾಥದಾಸರು 'ಹರಿಕಥಾಮೃತಸಾರ'ವನ್ನು ರಚಿಸುವಂತೆ ಪ್ರೇರಣೆ ಕೊಟ್ಟದ್ದು.
- ಹಯಗ್ರೀವದೇವರು ಕಡಲೆ ಹೊಲವನ್ನು ಹೊಕ್ಕ ಮೇಲೆ ಅದೆಲ್ಲ ಬಂಗಾರದ ಕಡಲೆಯಾದದ್ದು.
- ಶ್ರೀ ವಾದಿರಾಜರ ಹೆಗಲ ಮೇಲೆ ತನ್ನ ಕಾಲ್ಗಳನ್ನಿರಿಸಿ ಹಯಗ್ರೀವದೇವರು ನೈವೇದ್ಯ ಹೂರಣವನ್ನು ಭಕ್ಷಿಸಿದ್ದು.
- ಉಡುಪಿಯ ರಥೋತ್ಸವ ಕಾಲಕ್ಕೆ ಬಂದ ಮಳೆಯನ್ನು ತಡೆದುದು.
- ಉತ್ತರ ಭಾರತ ಸಂಚಾರದ ಕಾಲಕ್ಕೆ ವೇದವ್ಯಾಸದೇವರ ದರ್ಶನ ಪಡೆದದ್ದು.
- ವಿಜಯನಗರದ ರಾಜನಿಗೆ ವಾಲಿಭಂಡಾರದ ಸಂಪತ್ತನ್ನು ತೋರಿಸಿ ತಾವು ಮಾತ್ರ ಶ್ರೀ ವಿಠ್ಠಲ ಹಾಗೂ ಶ್ರೀರಾಮ ದೇವರ ಮೂರ್ತಿಗಳನ್ನ ಮಾತ್ರ ತೆಗೆದು ಕೊಂಡದ್ದು.

- ಭೂತರಾಜ ಹಿನ್ನೆಲೆ, ಶಾಪದ ಪ್ರಸಂಗ, ಮುಂದೆ ಅವರಿಂದ ತ್ರಿವಿಕ್ರಮದೇವರನ್ನು ರಥಸಹಿತವಾಗಿ ತರಿಸಿ, ಪ್ರತಿಷ್ಠಾಪಿಸಿದ್ದು.
- ಶ್ರೀ ವ್ಯಾಸರಾಯರು ಉಡುಪಿಯಿಂದ ತೆಗೆದುಕೊಂಡು ಹೋಗಿದ್ದ, ವ್ಯಾಸಮುಷ್ಟಿಯನ್ನು ಮರಳಿ ತಂದದ್ದು.
- ಸೋದೆಯ ಅರಸು ಅರಸಪ್ಪ ನಾಯಕನನ್ನು ಅನುಗ್ರಹಿಸಿದ್ದು, ಅವನ ಲಿಂಗಾಯತ ಗುರುವನ್ನು ಸೋಲಿಸಿ ಅವನು ಗೆದ್ದುಕೊಂಡಿದ್ದ ಬಿರುದುಗಳನ್ನೆಲ್ಲ ವಾದಿರಾಜರಿಗೆ ಅರ್ಪಿಸಿದ್ದು.
- ನಿರ್ಯಾಣ ಕಾಲದಲ್ಲಿ ಪಂಚವೃಂದಾವನ ನಿರ್ಮಿಸಿ ಮಧ್ಯದಲ್ಲಿ ಸಶರೀರಿಯಾಗಿ ವೃಂದಾವನಸ್ಥರಾದುದು.

ಶ್ರೀ ವಾದಿರಾಜರ ಕೃತಿರಚನೆಯಲ್ಲಿ ಕೆಲವನ್ನು ಮೇಲಿಂದ ಮೇಲೆ ಹರಿದಾಸರು ಉಲ್ಲೇಖಿಸುತ್ತಾರೆ. ಅವೆಂದರೆ ರುಕ್ಮಿಣೀಶ ವಿಜಯ, ಯುಕ್ತಿಮಲ್ಲಿಕಾ ತೀರ್ಥಪ್ರಬಂಧ ಹಾಗೂ ಮಹಾಭಾರತದ ಶಬ್ದಗಳಿಗೆ ಅರ್ಥವನ್ನು ಬರೆದು ತಾಯಿಯ ಹರಕೆಯನ್ನು ತೀರಿಸಿದ್ದರ ಕೃತಿ; ಮತ್ತು ಕನ್ನಡ ಹಾಡುಗಳಲ್ಲಿ 'ಲಕ್ಷ್ಮೀಶೋಭಾನ'.

ಶ್ರೀ ವಾದಿರಾಜರ ಬದುಕಿನ ಇತಿವೃತ್ತವೆಂಬಂತೆ (ಅಂಕಿತ ರಹಿತವಾದ) ಜನೆಯ ಹಾಡು ಇದೆಯಲ್ಲವೆ. ಅದರಲ್ಲಿ 'ವರದ್ವಾದಶ ಸ್ತೋತ್ರದಿ ಬಹು ವಿಷಹರನಹುದು ನಿಜ–ಎನುತ ಅರುಹಿ' (ನುಡಿ ೧೧) ಮತ್ತು 'ಅಂಧತೆಯಲಿ ಶ್ರೀಕೃಷ್ಣನ ದರುಶನಕೆಂದು ಬಂದು ಒಡನೆ ಕಂಡು....ಸ್ವಾದಿಗೆ ಮರಳುತಾ' ಎಂಬ ಮಾತುಗಳಿವೆ. ಇವೆರಡರ ಸಂದರ್ಭಗಳು ಅಪರಚಿತವೆಂಬಂತೆ ತೋರುತ್ತಿವೆ.

ಕೆಲವೊಂದು ಸಂದರ್ಭಗಳ ವರ್ಣನೆ ನಾಟಕೀಯ ರೀತಿಯಲ್ಲಿ ಹೃದಯಂಗಮವಾಗಿ ಕೊಟ್ಟದ್ದಿದೆ. ತ್ರಿವಿಕ್ರಮದೇವರ ತೃತೀಯ ರಥೋತ್ಸವದ ಕಾಲಕ್ಕೆ ಸ್ವರ್ಗಲೋಕಕ್ಕೆ ಕರೆದೊಯ್ಯ

ಬಂದ ದೇವತೆಗಳನ್ನು ತಡೆದು ನಿಲ್ಲಿಸಿದ ಸಂದರ್ಭವನ್ನು ಪ್ರೇಮಕೃಷ್ಣರು ತಮ್ಮ ಹಾಡಿನಲ್ಲಿ ಸೊಗಸಾಗಿ ಕೊಟ್ಟಿದ್ದಾರೆ. (ಹಾಡು ೯೦). ಲಕ್ಷ್ಮೀಶೋಭಾನವನ್ನು ವಾದಿರಾಜರು ಹಾಡಿ ಮದುಮಗನನ್ನು ಬದುಕಿಸಿದ್ದರ ವರ್ಣನೆಯೂ ಇದೇ ರೀತಿಯಲ್ಲಿದೆ. (ಫಣಿಶಾಯಿವಿಠಲ ಕೃತ ೯೧ನೆಯ ಹಾಡು). ಅಂದ ಹಾಗೆ ೧೦೩ನೆಯ ಹಾಡಿನಲ್ಲಿ 'ನಾಶಿಕದ ಶ್ವಾಸಭೇದ ಮೂರು ವಿಧ ಪ್ರೇರಿಸುವ' ಎಂಬ ಮಾತು ಗೂಢಾರ್ಥವನ್ನು ಒಳಗೊಂಡಿದೆ. ನನಗೆ ವಿಶೇಷ ಮೆಚ್ಚಿಕೆಯಾದದ್ದು. ಶ್ರೀ ವಾದಿರಾಜರ ವೇಷ, ಸ್ವರೂಪಗಳನ್ನು ಗುರುಜಗನ್ನಾಥರು ಉಪಮಾಲೋಲತೆಯಿಂದ ಹೇಳಿದ ೨೭ನೆಯ ಹಾಡು. ಇದೊಂದು ಮಾದರಿ :

**ಯತಿಕುಲವರ್ಯನ ಸ್ಮಿತಯುತ ವಕ್ತ್ರವರ್ತುಲವೊ**
**ಅರಳಾಂಬುಜವೋ**
**ಅತಿಮಹಿಮನ ವರಸಿತಕರ ದಂತಾವಳಿಯೋ**
**ಮಲ್ಲಿಗೆ ಮುಗುಳೋ**
**ಕ್ಷಿತಿಸುರವಂದನ ಅತಿಸುಂದರ ನಾಸಿಕವೋ**
**ತಿಲಕಕುಸುಮವೊ**
**ಗತಿಶೂನ್ಯಗೆ ಸದ್ಗತಿದಾತನ ನಯನಗಳೋ**
**ನೈದಿಲೆಯುಗಳೋ**

ಇಂಥದೇ ಕಲ್ಪಕತೆಯನ್ನು ಮುದ್ದುಹಯನದನರು, ಸೂರ್ಯ ಚಂದ್ರಾದಿ ನವಗ್ರಹಗಳೆಲ್ಲವೂ ಶ್ರೀ ವಾದಿರಾಜರಲ್ಲಿ ಪ್ರತಿಫಲಿತವಾಗಿವೆಯೆಂಬ ಮಾತನ್ನು ವ್ಯಕ್ತಪಡಿಸಿದ್ದಾರೆ. (೧೦೩ನೆಯ ಹಾಡು).

**ಯತಿಯೆ ನಿನ್ನಯ ತೇಜವೆನಗಿನ್ನು ಭಾನುಬಲ**
**ಹಿತಮುಖಾಬ್ಜ ದರುಶನವೆ ಹಿಮಕರ ಬಲ,** ಇತ್ಯಾದಿ.

ಸುಪ್ರಸಿದ್ಧ ಗುರುಗೋಪಿಂದವಿಠಲರ ಒಂದು ಹಾಡಿನಲ್ಲಿಯ ಭಾವತುಷ್ಟಿ ಇದೇ ರೀತಿಯಲ್ಲಿ ಮೆಚ್ಚುವಂತಹುದಿದೆ. ಶ್ರೀ ವಾದಿರಾಜರು ೧೨೦ ವರ್ಷ ಬಾಳಿದರಷ್ಟೆ. ಅಂದರೆ ಸರಿಯಾಗಿ ಎರಡು ಯುಗಗಳ ಕಾಲ (೬೦+೬೦) . ಅವರು ಜನಿಸಿದ್ದು ಶಾರ್ವರಿ ಸಂವತ್ಸರದಲ್ಲಿ. ಅಂದಾಗ ವೃಂದಾವನಸ್ಥರಾದದ್ದೂ ಶಾರ್ವರಿಯಲ್ಲೇ ಎಂದಾಯಿತಲ್ಲವೆ. ಗೊತ್ತಿದ್ದ ವಿಷಯ. ಆದರೆ ಅದನ್ನು ನಮ್ಮ ಗಮನಕ್ಕೆ ತಂದ ರೀತಿ ಖುಷಿಕೊಡುತ್ತದೆ (ಹಾಡು ೭೭).

**ಈಚಿನವರು**

ಇಪ್ಪತ್ತನೆಯ ಶತಮಾನದ ಇನ್ನು ಕೆಲವರನ್ನು ಇಲ್ಲಿ ಹೆಸರಿಸಬೇಕು. ಚಂಜಿ ದ್ರುವರಾಯರು ಮೂಲತಃ ಹೈದರಾಬಾದಿನವರು. 'ಅರವಿಂದನಾಭವಿಠಲ' ಎನ್ನುವ ಅವರ ಅಂಕಿತವನ್ನು ಪ್ರಾಯಶಃ ತಂದೆ ಮುದ್ದುಮೋಹನದಾಸರು ಕೊಟ್ಟಿರಬೇಕು. (ಪದ್ಯ ೬೨) 'ಕರಿಗಿರೀಶ' ಎಂದರೆ ವರವಣೆ ರಾಮರಾಯರು ಈ ಶತಮಾನದವರೇ. 'ಕೃಷ್ಣವಿಠಲ' ಎನ್ನುವುದಕ್ಕೆ 'ಶ್ರೀನಿವಾಸ' ಎಂಬ ಉಪನಾಮವನ್ನು ಸೇರಿಸಿ ವಾದಿರಾಜರನ್ನು ಹೊಗಳಿದವರ ಹೆಸರು ಭೀಮರಾವ. ೨೦ನೆಯ ಶತಮಾನದ ಆರಂಭದಲ್ಲಿದ್ದವರು; ಉರಗಾದ್ರಿವಾಸವಿಠಲರ ಸಂಬಂಧಿಕರಾದ್ದರಿಂದ ಅವರೇ ದಾಸದೀಕ್ಷೆಯನ್ನು ಕೊಟ್ಟಿರಲು ಸಾಕು.

'ಜಯೇಶ ವಿಠಲ'ರೆಂದರೆ ಇನ್ನಾರೂ ಅಲ್ಲ; ಮೈಸೂರಿನ ಕಟ್ಟಿಮನೆಯ ಅಟ್ಟಾಜಿ ವೆಂಕಟರಮಣಾಚಾರ್ಯರು (೧೮೪೦-೧೯೩೩). ಅವರ ಕೀರ್ತನೆಗಳು ಅರ್ಥಗರ್ಭಿತವಿರುವುದರ ಜೊತೆಗೆ, ಸುಶ್ರಾವ್ಯವಾಗಿ ಹಾಡಲು ಬರುವಂತಿದೆ. 'ತಂದೆ ವೆಂಕಟೇಶವಿಠಲ'ರ ಹೆಸರು ರಾಮಚಂದ್ರರಾವ್ ಎಂಬುದು. ಹೆಚ್ಚು ಕಾಲ ಅವರು ವಾಸಿಸಿದ್ದು ಚಿತ್ರದುರ್ಗದಲ್ಲಿ. (ಪದ ೮೬-೮೮). ಅವರ ಹಾಡುಗಳ ಬೃಹತ್ ಸಂಗ್ರಹ ಈಚೆಗೆ

ಪ್ರಕಟವಾಗಿದೆ. ಆ ಮುಂದಿನ ಹಾಡಿನ ರಚಯಿತರು (ಪದ ೮೫) ನಾಗಶಯನವಿಠಲರು. ನಿಜವಾದ ಹೆಸರು ಬಾಟ್ಲಿ ನಾಗರಾಜರಾವ್. ಶಿಕಾರಿಪುರದವರು. ಅವರೂ ಉರಗಾದ್ರಿವಾಸ ವಿಠಲರ ಶಿಷ್ಯರೆಂದು ಹೇಳುತ್ತಾರೆ.

ಫಣಿಶಾಯಿ ವಿಠಲರ ಆರು ಹಾಡುಗಳನ್ನು ಇಲ್ಲಿ ಸೇರಿಸಿದ್ದರ ಕಾರಣ, ಅವರಲ್ಲಿ ವಿಚಾರದ ಹೊಸತನ ಅಲ್ಲಲ್ಲಿ ಹೊಮ್ಮಿದೆ. ಅವರ ನಿಜವಾದ ಹೆಸರು ಮಾಲಾಡಿ ಫಣಿಭಟ್ಟ ಎಂಬುದು. ಅವರು ಒಳ್ಳೆಯ ಕೀರ್ತನಕಾರರು. ಆ ಮುಂದಿನ 'ಶ್ರೀಮುದ್ದುವಿಠಲ' ಮುದ್ರಿಕೆಯ ಶ್ರೀಮತಿ ಪಡಸಲಗಿ ರುಕ್ಮಿಣಿಬಾಯಿಯವರ ಬಗ್ಗೆ ಒಂದೆರಡು ವಿಷಯಗಳನ್ನು ಹೇಳಬೇಕು. ಅವರು ಕಲಿತದ್ದು ಕೇವಲ ೪–೫ ಇಯತ್ತೆಯ ವರೆಗೆ. ಅವರ ತವರಿನ ಮನೆತನ ಕಲಮದಾನಿಯವರದು. ಕಲಮದಾನಿ ನಾರಾಯಣರಾಯರು ದಾಸ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿದವರು. ಸ್ವತಃ ಹಾಡುಗಳನ್ನು ರಚಿಸಿದವರು. ಇಂಥ ವಾತಾವರಣದಲ್ಲಿ ಬೆಳೆದು ಬಂದ ಅವರಿಗೆ ಭಕ್ತಿಭಾವದ ಕವನ ರಚನೆ ಸಹಜ ಸ್ಫೂರ್ತವಾಗಿದೆ. ನೂರಾರು ಕವನಗಳನ್ನು ರಚಿಸಿದ್ದು, ಸದ್ಯ ಹುಬ್ಬಳ್ಳಿಯಲ್ಲಿ ವಾಸವಾಗಿದ್ದಾರೆ. 'ಗೋವಿಂದಪ್ರಿಯ' ಅಥವಾ 'ಗೋವಿಂದವಿಠಲ' ಮುದ್ರಿಕೆಯವರ ನಿಜವಾದ ಹೆಸರು ಮಂಜುನಾಥ ಛಾತ್ರ. ಚಿಕ್ಕಮಗಳೂರಿನ ಕಡೆಯವರು. ಕೀರ್ತನೆಗಳ ರಾಗ, ಧಾಟಿಗಳನ್ನು ಚೆನ್ನಾಗಿ ಬಲ್ಲ ಅವರು ದಾಸ ಸಾಹಿತ್ಯದ ಕಾರ್ಯವನ್ನು ಮುಂದುವರಿಸಿದ್ದಾರೆ.

ಕೊನೆಯದಾಗಿ ಇಲ್ಲಿಯ ಹಾಡುಗಳಲ್ಲಿ ಕಂಡುಬರುವ ನುಡಿಗಟ್ಟು. ಹರಿದಾಸರ ಹಾಡುಗಳ ಭಾಷೆಯಲ್ಲಿ ಶಬ್ದಗಳು ರೂಢಿಗತವಾದವುಗಳೇ ಇರುತ್ತವೆ. ವ್ಯಾಕರಣದ ನಿಯಮಗಳನ್ನು, ಅದರಂತೆ ದ್ವಿತೀಯ ಪ್ರಾಸ ನಿಯಮವನ್ನು ಅವರುಗಳು ಕಟ್ಟುನಿಟ್ಟಾಗಿ ಪಾಲಿಸುವುದಿಲ್ಲ. ಅವರು ಸ್ವಯಂ ಪ್ರೇರಣೆಯಿಂದ

ಹಾಡುಗಳನ್ನು ಹೇಳುತ್ತಾರೆ. ಈಗಿನ ಕಾಲದ ಕವಿಗಳಂತೆ ಕುಳಿತು ಬರೆಯುವ ಕ್ರಮ ಅವರದಲ್ಲ. ಆದ್ದರಿಂದ ಎಷ್ಟೋ ಬಾರಿ ವಿಚಿತ್ರ ರೀತಿಯಲ್ಲಿ ಪದಗಳನ್ನು ಜೋಡಿಸುತ್ತಾರೆ. ಎನ್ನಣೆಗೆ (ಎನ್ನ ಹಣೆಗೆ), ನಿನ್ನವಸನಾಗಿಹ (ನಿನ್ನ ವಶನಾಗಿಹ) ಸನ್ನಿತ (ಸನ್ನಿಹಿತ) ಎಂಬಂಥ ಪದಗಳು ಮೇಲಿಂದ ಮೇಲೆ ಬರುತ್ತವೆ. ಅವನ್ನು ಸುಧಾರಿಸಿಕೊಂಡು ಅವಲೋಕಿಸಬೇಕಾಗಿ ವಿನಂತಿ. ಆದರೆ, ಹಾಡುಗಳಲ್ಲಿ ಅನುಪ್ರಾಸ ಮಾತ್ರ ತಾನೇ ತಾನಾಗಿ ಮೆರೆದಿದೆ. 'ವಾದಿರಾಜ, ಸ್ವಾದಿರಾಜ' ಎಂಬಂತಹ ಪದಗುಚ್ಛಗಳು ಮನಸ್ಸಿಗೆ ಹಿತವನ್ನುಂಟುಮಾಡಬಲ್ಲವು.

ಇಂತಿದೆ ಈ ಸಂಕಲನದ ರೀತಿ. ಮೇಲೆ ಹೇಳಿದಂತೆ ಶ್ರೀ ವಾದಿರಾಜರೇ ಇಲ್ಲಿಯ ಏಕಮೇವ 'ಕಥಾವಸ್ತು' ಆಗಿರುವುದರಿಂದ ಅನೇಕ ವಿಷಯಗಳ ಪುನರಾವೃತ್ತಿ ಇರುವುದು ಸಹಜ. ಒಳ್ಳೆಯದೇ ಆಯಿತಲ್ಲ, ಗುರುಗಳನ್ನು ಪದೇ ಪದೇ ನೆನೆಯುವುದಕ್ಕೆ! ಆ ಕಾರಣದಿಂದ ಇದು, ಒಮ್ಮೆ ಓದಿಬಿಟ್ಟು ಬದಿಗಿರಿಸುವ ಕೃತಿಯಾಗುವುದಿಲ್ಲ; ಹಾಗೆ ಆಗಬಾರದು.

ಹೀಗೆ ಈ ಹಾಡುಗಳು ಹಲವಾರು ವೈಶಿಷ್ಟ್ಯಗಳಿಂದ ಕೂಡಿದ್ದಾಗಿ, ಅರ್ಥಪೂರ್ಣವಾದ ವಾಚನಕ್ಕೂ ಭಕ್ತಿಭಾವದಿಂದ ಹಾಡುವುದಕ್ಕೂ ಅನುಕೂಲವಾಗಿವೆ ಎಂದು ನಮ್ರವಾಗಿ ಸೂಚಿಸ ಬಯಸುತ್ತೇನೆ.

**ಸಂಪಾದಕ**

---

# ಶ್ರೀ ವಾದಿರಾಜರ ಪ್ರಭಾವಲಯದ ಹಬ್ಬುಗೆ

## (ಉತ್ತರಭಾಗದ ಕರ್ನಾಟಕವನ್ನು ಅನುಲಕ್ಷಿಸಿ)

ಕೆಲವು ವರ್ಷಗಳ ಹಿಂದಿನ ಮಾತು. ಧಾರವಾಡದಲ್ಲಿಯ ನನ್ನೊಬ್ಬ ಮಿತ್ರ–ವಕೀಲರ ಮಗ ಬೆಂಗಳೂರಲ್ಲಿ ಅಕಸ್ಮಾತ್ ಸಂಧಿಸಿದ. ಅವನು ಮದ್ರಾಸದಲ್ಲಿದ್ದು ಸುಸ್ಥಿತಿಯಲ್ಲಿ ಇದ್ದಾನೆ.

"ಎಲ್ಲಿಗೆ ಹೊರಟಿದ್ದೀಯ? ಧಾರವಾಡಕ್ಕೇನು" ಎಂದು ಕೇಳಿದೆ.

"ಇಲ್ಲ. ಸ್ವಾದಿಗೆ ಹೊರಟೇನಿ."

ನನಗೆ ಆಶ್ಚರ್ಯವಾಯಿತು. "ಈಗ ಯಾಕೊ? ಏನಾದರೂ ಧಾರ್ಮಿಕ ಕಾರ್ಯವೆ?" ಎಂದು ಕೇಳಿದೆ.

"ಏನಿಲ್ಲ, ನನಗೆ ಜೀವನದಲ್ಲಿ ಏನಾದರೂ ಒಳ್ಳೆಯ ದಾದರೆ, ಸ್ವಾದಿಯ ನೆನಪಾಗುತ್ತದೆ. ವಾದಿರಾಜ ಗುರುಗಳಿಗೆ ಥ್ಯಾಂಕ್ಸ್ ಹೇಳಲಿಕ್ಕೆ ಹೊರಟೇನಿ."

ಇನ್ನೊಂದು ಈಚಿನ ಪ್ರಸಂಗ; ನಾನು ಹುಬ್ಬಳ್ಳಿಯಿಂದ ಎಸ್.ಟಿ. ಬಸ್ಸಿನಲ್ಲಿ ಸೋದೆಗೆ ಹೊರಟಿದ್ದೆ. ಹುಲೇಕಲ್ ದಾಟದ ಮೇಲೆ ನಾವು ಮೂವರು ಮಾತ್ರ ಉಳಿದಿದ್ದೆವು. ಒಬ್ಬ ಹಳ್ಳಿಯವ. ಇನ್ನೊಬ್ಬ ಜೀನ್ಸ ಧರಿಸಿದ್ದ ೧೮–೨೦ ವರ್ಷದ ತರುಣ. ಸೋದೆಯಲ್ಲಿ ಬಸ್ಸಿನಿಂದ ಇಳಿದ ಮೇಲೆ, ನನ್ನನ್ನು ಇಂಗ್ಲೀಷ್‌ನಲ್ಲಿ ಕೇಳಿದ :

"ನೀವು ಮಠಕ್ಕೆ ಹೊರಟೀರೇನು? ನಾನು ಹೈದ್ರಾಬಾದಿನವ. ನನಗೆ ಇಲ್ಲಿ ಒಂದು ವಾರ ಇದ್ದು ಸೇವೆ ಮಾಡಬೇಕಂತೆ.

ಅಮ್ಮ ಹೇಳಿ ಕಳಿಸಿದ್ದಾಳೆ. ಯಾರನ್ನು ಇಲ್ಲಿ ವಿಚಾರಿಸಬೇಕು? ಹಾಗೇ ನನಗೆ ಒಂದು ಜನಿವಾರವನ್ನು ಕೊಡಿಸುವಿರಾ?"

ಸೋಂದೆಗೆ ಹೋಗೋದು; ಗುರುಗಳ ಸೇವೆ ಮಾಡೋದು –ಈ ಪರಿಕ್ರಮ ದಿನದಿನಕ್ಕೆ ಹೆಚ್ಚಾಗುತ್ತ ಸಾಗಿದೆ. ಅದಕ್ಕೆ ಯಾವುದೊಂದು ಅಪತ್ತಿನ ಪರಿಹಾರವೇ ಉದ್ದೇಶವಾಗಿರಬೇಕಿಲ್ಲ. ಮದುವೆ, ಮುಂಜಿ, ಷಷ್ಟ್ಯಬ್ದಿ–ಇಂಥ ಧರ್ಮಕಾರ್ಯಗಳನ್ನು ಸೋದೆಯಲ್ಲಿಯೇ ನಡೆಸಬೇಕೆಂದು ಇಟ್ಟುಕೊಂಡವರೂ ಅದೆಷ್ಟೊ ಜನ. ಇದಾವುದಿಲ್ಲದಿದ್ದರೂ ಒಮ್ಮೆ ಸೋದೆಗೆ ಹೋಗಿಬರಬೇಕು ಎಂದು ತಿಳಿಯುವವರಿಗೂ ಲೆಕ್ಕವಿಲ್ಲ. ನನಗೆ ವಿಶೇಷವಾಗಿ ಕಂಡದ್ದೆಂದರೆ ಇಂಥವರಲ್ಲಿ ಹೆಚ್ಚಿನವರು ಔತ್ತರೇಯ ಕರ್ನಾಟಕದವರು. ಅಲ್ಲದೆ ಅನ್ಯ ಮಠಗಳ ಅನುಯಾಯಿಗಳು.

ನಮ್ಮಲ್ಲಿ ಇರುವ ಕೆಲವೇ ವಾದಿರಾಜೀಯ ಮೃತ್ತಿಕಾ ವೃಂದಾವನಗಳಲ್ಲಿ ಹೆಚ್ಚಿನವು ಔತ್ತರೇಯ ಕರ್ನಾಟಕದಲ್ಲೇ ಇವೆ. ಶ್ರೀ ವಾದಿರಾಜರು ಆ ಪ್ರದೇಶಗಳಲ್ಲಿ ಹಲವು ಬಾರಿ ಸಂಚರಿಸಿದ್ದರಲ್ಲಿ ಸಂದೇಹವೇ ಇಲ್ಲ. 'ತೀರ್ಥಪ್ರಬಂಧ'ದಲ್ಲಿ ಅದಕ್ಕೆ ನಿದರ್ಶನಗಳು ಸಿಕ್ಕುತ್ತವೆ. ಸೋದೆಯ ಹತ್ತಿರದ ಯಾಣ, ಗೋಕರ್ಣ, ಮಂಜುಗಣಿಗಳಂತೂ ಸರಿಯೇ. ಧಾರವಾಡ ಜಿಲ್ಲೆಯ ಬಂಕಾಪುರ, ಬಿದರಹಳ್ಳಿ; ಬಳ್ಳಾರಿ ಜಿಲ್ಲೆಯ ಹಂಪಿ, ಆನೆಗೊಂದಿಗಳನ್ನೂ, ಅಲ್ಲಿಯ ದೇವತೆಗಳನ್ನೂ ಆ ಕಾವ್ಯದಲ್ಲಿ ರಸವತ್ತಾಗಿ ವರ್ಣಿಸಿದ್ದಾರೆ.

ಶ್ರೀ ವಾದಿರಾಜರ ಜೀವಿತ ಕಾಲದಲ್ಲಿಯೇ ಉತ್ತರ ಕರ್ನಾಟಕಸ್ಥರು ಕೆಲವರಾದರೂ ಅವರ ಶಿಷ್ಯತ್ವವನ್ನು ವಹಿಸಿದ್ದರು. ಕನಕದಾಸರು ಕಾಗಿನೆಲೆಯವರು. ಉಡುಪಿಗೆ ಹೋಗಿ ಶ್ರೀ ವಾದಿರಾಜರ ಕೃಪೆಯಿಂದ ಕೃಷ್ಣದರ್ಶನ ಪಡೆದದ್ದು ಸರಿಯೇ. ಆ ಮುಂದೆ ಅವರು ಸೋದೆಗೂ ಹೋಗಿ ಶ್ರೀ ವಾದಿರಾಜರನ್ನು ಕಂಡು ಬರುತ್ತಿದ್ದಿರಬೇಕು.

ತಾನು 'ಸೋದೆಯ ಶ್ರೀ ತ್ರಿವಿಕ್ರಮ ದೇವರ ದಾಸರ ದಾಸ' ಎಂದು ಕರೆದುಕೊಂಡಿದ್ದಾರೆ.

ಓರ್ವ ಅದ್ವೈತ ಪಂಡಿತನೊಂದಿಗೆ ವಾದ ಹೂಡಲೆಂದು ಹೋಗಲು ಶ್ರೀ ವಾದಿರಾಜರಿಗೆ ಅನುಕೂಲವಾಗಿರಲಿಲ್ಲ; ತಮ್ಮ ಶಿಷ್ಯರೊಬ್ಬರನ್ನು ಕಳುಹಿಸಿದರು; ಅವರು ಆ ಪಂಡಿತನನ್ನು ಸೋಲಿಸಿ ಜಯಪತ್ರವನ್ನು ತಂದು ಶ್ರೀ ವಾದಿರಾಜರಿಗೆ ಅರ್ಪಿಸಿದರು ಎಂಬುದಾಗಿ ವಾದಿರಾಜರ ಚರಿತ್ರೆಯಲ್ಲಿ ಬರುತ್ತದೆ. ಈ ಯಶಸ್ವೀ ಕೆಲಸ ಮಾಡಿದವರು, ಧಾರವಾಡ ಕಡೆಯಲ್ಲಿ ಪ್ರಸಿದ್ಧವಾಗಿರುವ ಪಾಂಡುರಂಗಿ ಮನೆತನದ ಆನಂದಭಟ್ಟಾಚಾರ್ಯರು. (ಉತ್ತರಾದಿ ಮಠದ ಶ್ರೀ ವಿದ್ಯಾಧೀಶರು ಪೂರ್ವಾಶ್ರಮದಲ್ಲಿ ಇವರ ಮಗ.)

ಶ್ರೀ ವಾದಿರಾಜರ ಸುದೀರ್ಘ ಜೀವಿತ ಕಾಲದಲ್ಲಿ ನಾಲ್ವರು ಯತಿಗಳು ಉತ್ತರಾದಿಮಠದ ಪೀಠವನ್ನು ಅಲಂಕರಿಸಿದ್ದರು. ಅವರಲ್ಲಿ ಶ್ರೀ ವಿದ್ಯಾನಿಧಿತೀರ್ಥರು ಮತ್ತು ಶ್ರೀ ರಘೂತ್ತಮತೀರ್ಥರು ಹೆಚ್ಚು ಖ್ಯಾತಿವೆತ್ತವರು. ಅವರೊಡನೆ ಶ್ರೀ ವಾದಿರಾಜರ ಸಂಬಂಧ ಹೇಗಿದ್ದಿತೆಂದು ಸ್ಪಷ್ಟವಾಗಿ ತಿಳಿಯದು. ಹಾರ್ದಿಕವಾಗಿಯೇ ಇದ್ದಿರಲು ಸಾಕು. ಅದೇ ಶ್ರೀ ವಿಜಯೀಂದ್ರತೀರ್ಥರೊಡನೆ ಅದರಂತೆ ಪರ್ತಗಾಳಿಮಠದ ಜೀವೋತ್ತಮ ತೀರ್ಥರೊಡನೆ ವಿಶೇಷ ಸಂಪರ್ಕವಿದ್ದ ಬಗ್ಗೆ ಪುರಾವೆಗಳಿವೆ. ಕುಮಠೆ ಹಾಗೂ ಗೋಕರ್ಣದಲ್ಲಿ ಈಗಲೂ ವಾದಿರಾಜೀಯ ಮಠಗಳಿವೆ.

ಶ್ರೀ ವಾದಿರಾಜರು ವೃಂದಾವನಸ್ಥರಾದ ೬೦–೭೦ ವರ್ಷಗಳಲ್ಲಿಯೇ ಅವರ ಖ್ಯಾತಿ ಔತ್ತರೇಯ ಕರ್ನಾಟಕದಲ್ಲಿ ಹಬ್ಬಿದ್ದಿತು. ನಮಗೆ ದೊರೆತ ವಾದಿರಾಜ ಸ್ತುತಿಪರ ಹಾಡುಗಳಲ್ಲಿ ಮೊದಲಿನದು ಪ್ರಸನ್ನವೆಂಕಟದಾಸರದ್ದು. ಅವರು ಬಾಗಲಕೋಟೆ ಶಾಖಂಡಕಿಯವರು. ಅದಕ್ಕೂ ಉತ್ತರದಲ್ಲಿದ್ದ ವಿಜಯದಾಸರು ಇವರ ಸಮಕಾಲೀನರೇ. ಶ್ರೀ ವಾದಿರಾಜರನ್ನು

ಮನದಣಿಯೆ ಸ್ತುತಿಸಿದ್ದಾರೆ ಮಾತ್ರವಲ್ಲ, ಶ್ರೀ ವಾದಿರಾಜರ ಋಜುತ್ವ ಹಾಗೂ ಭಾವೀಸಮೀರತ್ವವು ಕೂಡ ಅವರ ಕಾಲಕ್ಕೆ ನೆಲೆಗೊಂಡಿರಬೇಕು. ಎಂತಲೇ ಅವರು ತಮ್ಮ ಹಾಡುಗಳಲ್ಲಿ ಈ ಅಂಶಗಳನ್ನು ತಂದಿದ್ದಾರೆ. ಈಗ ಋಜುತ್ವ ವಿಚಾರವನ್ನು ಪ್ರತಿಪಾದಿಸುವವರು ಅಪರೋಕ್ಷ ಜ್ಞಾನಿಗಳಾದ ವಿಜಯದಾಸರನ್ನು ಅವಶ್ಯವಾಗಿ ಉಲ್ಲೇಖಿಸುತ್ತಾರೆ. ವಿಜಯದಾಸ ರಂತಹ ಮಹಾಮಹಿಮ ಗುರುಗಳು ಹೇಳಿದ ಮೇಲೆ ಇನ್ನೇನು–ಎಂದು, ಅವರ ಶಿಷ್ಯ ಪ್ರಶಿಷ್ಯರೂ ಆ ಮಾತನ್ನು ಒಪ್ಪಿಕೊಂಡೇ ಮುಂದೆ ಸಾಗಿದ್ದಾರೆ. ತಂತಮ್ಮ ಕೀರ್ತನೆಗಳಲ್ಲಿ ಅದನ್ನು ತಂದಿದ್ದಾರೆ.

ಹತ್ತೊಂಬತ್ತನೆಯ ಶತಮಾನದಷ್ಟೊತ್ತಿಗೆ ಧಾರವಾಡ ಜಿಲ್ಲೆಯ ಹಲವಾರು ಉತ್ತರಾದಿಮಠೀಯರಲ್ಲಿ ವಾದಿರಾಜ ನಿಷ್ಠೆ ಆಳವಾಗಿ ಬೇರೂರಿತ್ತು. ಮಾದರಿಗೆಂದು ಸರಪಳಿ ಮನೆತನವನ್ನು ಹೆಸರಿಸುವೆ. ಆ ಮನೆತನದ ಹಿರಿಯ ತಲೆಮಾರಿನ ಗೋಪಾಲಕೃಷ್ಣಾಚಾರ್ಯರು ೧೯ನೇ ಶತಮಾನದ ಆರಂಭಕಾಲದವರು. ಸೋದೆಗೆ ಮೇಲಿಂದ ಮೇಲೆ ಹೋಗುತ್ತಿದ್ದ ರಲ್ಲದೇ ತರುಣ ವಯದ ವಿಶ್ವಪ್ರಿಯತೀರ್ಥರಿಗೆ ವೇದಾಂತ ಬೋಧನೆ ಮಾಡುತ್ತಿದ್ದರು, ಎಲ್ಲಿ? ಸ್ವತಃ ವಾದಿರಾಜ ವೃಂದಾವನದ ಸಮಕ್ಷಮದಲ್ಲಿ. ಯಾವುದೊಂದು ಪ್ರಮೇಯ ವನ್ನು ವಿವರಿಸುವಲ್ಲಿ ತಡವರಿಸಿದರೆ ಆಚಾರ್ಯರು ಮನದಲ್ಲಿ ಶ್ರೀವಾದಿರಾಜರನ್ನು ನೆನೆಯುತ್ತಿದ್ದರಂತೆ; ಅರ್ಥ ಸ್ಫುರಿಸು ತ್ತಿತ್ತಂತೆ!

## ಜಂಬುಖಂಡಿ ವಾದಿರಾಚಾರ್ಯರು

ಉತ್ತರ ಭಾಗದ ಕರ್ನಾಟಕದಲ್ಲಿ (ಬಳ್ಳಾರಿಯೂ ಸೇರಿದಂತೆ) ಶ್ರೀ ವಾದಿರಾಜರ ಪ್ರಭಾವಲಯವನ್ನು ವಿಸ್ತರಿಸಿದವರಲ್ಲಿ ಜಂಬುಖಂಡಿ ವಾದಿರಾಜಾಚಾರ್ಯರ ಪಾತ್ರ ಹಿರಿದಾದದ್ದು (೧೯ನೆಯ ಶತಮಾನದ ಉತ್ತರಾರ್ಧ).

ಅವರು ಮೂಲತಃ ಹಾನಗಲ್ಲಿನವರು. ತಂದೆತಾಯಿಗಳು ಹಾನಗಲ್ಲಿಗೆ ಸಮೀಪವೇ ಇರುವ ಸೋದೆಗೆ ಹೋಗಿ ಶ್ರೀ ಗುರುಗಳ ಸೇವೆ ಮಾಡಿದ್ದರಿಂದ ಮಗ ಹುಟ್ಟದನೆಂದು ವಾದಿರಾಜ ಎಂದೇ ನಾಮಕರಣ ಮಾಡಿದರು. ಆಗ ಸೋದೆಯ ಮಠದಲ್ಲಿ ವಿಶ್ವಪ್ರಿಯ ತೀರ್ಥರು (೧೭೮೬-೧೮೬೫) ಎಂದರೆ ವೃಂದಾವನಾಚಾರ್ಯರು, ಪೀಠಾಧಿಪತಿಗಳಾಗಿ ಇದ್ದರು. ಈ ವಾದಿರಾಜನ ಬಾಲ್ಯದ ವಿದ್ಯಾಭ್ಯಾಸವು ಅವರ ಕಣ್ಣರಿಕೆಯಲ್ಲೇ ಆಯಿತು. ವಾದಿರಾಜ ಭಕ್ತಿಯು ಅವರಲ್ಲಿ ಕ್ರಮೇಣ ನೂರ್ಮಡಿಸಿತು. ಅವರ ಜೀವಿತದ ಕಾಲದಲ್ಲಿ ಶ್ರೀ ಸತ್ಯಧರ್ಮರು, ಶ್ರೀ ಸತ್ಯಪರಾಕ್ರಮರು, ಶ್ರೀ ಸತ್ಯವೀರರು–ಈ ಮೂವರು ಪೀಠಾಧಿಪತಿಗಳಾಗಿ ಉತ್ತರಾದಿ ಮಠದ ಸಂಸ್ಥಾನವನ್ನು ಆಳಿದ್ದರು. ಮೂಲ ನವರತ್ನ ಮನೆತನದ ಶ್ರೀ ಸತ್ಯಧರ್ಮರಂತೂ 'ಸತ್ಯಧರ್ಮ ಇತಿಖ್ಯಾತೋ ವಾದಿರಾಟ್ ಭಕ್ತಿಪೂರಿತಃ' ಎಂದೇ ಪ್ರಸಿದ್ಧರಾದವರು. ಅವರ ವೃಂದಾವನದಲ್ಲಿ ಈಗೂ ಶ್ರೀ ವಾದಿರಾಜರಿಗೆ ಹಸ್ತೋದಕ ನೀಡಲಾಗುತ್ತಿದೆ ಎಂದು ಕೇಳಿದ್ದೇನೆ. ಈಗಣ ವಾಯಿ ಮನೆತನದ ಸತ್ಯಪರಾಕ್ರಮರೂ ವಾದಿರಾಜರ ಭಕ್ತರೆಂದೇ ಪ್ರತೀತಿ ಇದೆ. ಜಂಬುಖಂಡಿ ಆಚಾರ್ಯರು ಇವರಲ್ಲಿಯೇ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಿದ್ದರು. ಆಗೆಲ್ಲ ಅವರು ವಾದಿರಾಜೀಯ ಸಂಪ್ರದಾಯದ ಪ್ರಕಾರ ಮೃತ್ತಿಕೆ ಹಚ್ಚಿಕೊಂಡೇ ಸುಳಿದಾಡುತ್ತಿದ್ದಾಗ, ಮಠದಲ್ಲಿದ್ದ ವೈದಿಕರು ಆಕ್ಷೇಪಿಸಿದರು. ಅದರಿಂದ ಆಚಾರ್ಯರು ಕೆಲಕಾಲ ಹೊರಗುಳಿಯ ಬೇಕಾಯಿತಂತೆ. ಕೊನೆಯಲ್ಲಿ ಶ್ರೀಗಳವರೇ "ದ್ವಾದಶ ನಾಮಗಳಿಗೆ ಮೃತ್ತಿಕಾ ಪ್ರತಿನಾಮ ಲೇಪಿಸಿದವರ ವಿಷಯ ಯಾರೂ ಆಕ್ಷೇಪಿಸಬೇಕಾದ ಕಾರಣವಿಲ್ಲ" ಎಂಬ ರಾಯಸವನ್ನು ಹೊರಡಿಸಬೇಕಾಗಿ ಬಂದಿತು.

ಅನಂತರ ಬಂದ ಕೊರ್ಲಹಳ್ಳಿ ಮನೆತನದ ಶ್ರೀ ಸತ್ಯವೀರರು ಜಂಬುಖಂಡಿ ಆಚಾರ್ಯರ ಸಹಪಾಠಿಗಳೇ.

ಸುರುವಿಗೆ ಶ್ರೀ ವಾದಿರಾಜರ ಋಜುತ್ವವನ್ನು ಒಪ್ಪಿಕೊಂಡವರೇ ಆಗಿದ್ದರಂತೆ. ಆವರೆ ಮುಂದೆ ಇಬ್ಬರಲ್ಲಿ ವಿರಸ ಉಂಟಾಯಿತು. ವಿಕೋಪಕ್ಕೆ ಹೋಯಿತು. ವಾದಿರಾಜಾಚಾರ್ಯರಿಗೆ ಬಹಿಷ್ಕಾರ ಹಾಕಲಾಯಿತು. ಅವರಿಂದ ಆಚಾರ್ಯರು ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಆದಾಗ್ಯೂ ಪುಟಕ್ಕಿಟ್ಟ ಬಂಗಾರದಂತೆ ಅವರಲ್ಲಿ ವಾದಿರಾಜ ಭಕ್ತಿ ಇನ್ನಷ್ಟು ಬೆಳಗಿತು. ತಮ್ಮ ಸಂಚಾರ ಕಾರ್ಯದಲ್ಲಿ ಋಜುತ್ವವನ್ನು ಘಂಟಾಘೋಷವಾಗಿ ಸಾರಿದು ದಲ್ಲದೆ, ಬಳ್ಳಾರಿ ಜಿಲ್ಲೆಯ ಶಿರಗುಪ್ಪಾ ಮತ್ತು ಬೆಳಗಾವಿ ಜಿಲ್ಲೆಯ ಶಹಾಪುರ– ಈ ಊರುಗಳಲ್ಲಿ ಪಂಚ ವೃಂದಾವನ ಸಹಿತವಾದ ಮೃತ್ತಿಕಾ ವೃಂದಾವನಗಳನ್ನು ಸ್ಥಾಪಿಸಿದರು.

ಮುಂದೆ ಬಳ್ಳಾರಿ, ಬೆಳಗಾವಿ ನಗರಗಳಲ್ಲಿ ವಾದಿರಾಜೀಯ ಮೃತ್ತಿಕಾ ವೃಂದಾವನಗಳು ನೆಲೆಗೊಂಡವು. ಈ ಪ್ರಾಶಸ್ತ್ಯವನ್ನು ಮನಗಂಡ ಧಾರವಾಡ ಜಿಲ್ಲೆಯವರೊಬ್ಬರು ಇದೇ ಸುಮಾರಿಗೆ ಹಾವನೂರ ಮತ್ತು ಸವಣೂರುಗಳಲ್ಲಿ ಮೃತ್ತಿಕಾ ವೃಂದಾವನ ಗಳನ್ನು ಸ್ಥಾಪಿಸಿದರು. ಏನಿದ್ದರೂ ಇವು ಐದಾರು ಮಠಗಳು ೧೯ನೆಯ ಶತಮಾನದ ಕೊನೆಯಲ್ಲಿ ಸ್ಥಾಪಿತವಾದವೆಂಬುದು ನಿಜ. ಸವಣೂರಲ್ಲಿಯ ವೃಂದಾವನವನ್ನು ಶ್ರೀ ಸತ್ಯಬೋಧ ಸ್ವಾಮಿಗಳ ಸೇವೆಯಲ್ಲಿರುವವರೇ ನೋಡಿಕೊಳ್ಳುತ್ತಿದ್ದಾರೆ. ಹಾವನೂರಲ್ಲಿ ಇರುವುದನ್ನು ಸ್ಥಳೀಯ ಗಲಗಲಿ ಮನೆತನದವರು ನೋಡಿಕೊಳ್ಳುತ್ತಿದ್ದಾರೆ. ಅವರು ಮಠದ ಜೀರ್ಣೋದ್ಧಾರವನ್ನು ಮಾಡಿಸಿರುವುದರಿಂದ ಮಠವು ಸುಸ್ಥಿತಿಯಲ್ಲಿದೆ. ಬದಿಯಲ್ಲೇ ತುಂಗಭದ್ರೆ ಹರಿಯುತ್ತಿದ್ದು ಸ್ಥಳವು ಪ್ರಶಸ್ತವಾಗಿದೆ. ಹರಿಹರ ದಿಂದ ಧಾರವಾಡದವರೆಗಿನ ಪ್ರದೇಶದ ಜನ ಆ ಮಠಕ್ಕೆ ನಡೆದುಕೊಳ್ಳುತ್ತಿದ್ದಾರೆ.

**ಕಳಸ ಗ್ರಾಮದಲ್ಲಿ**

ಎರಡು ವರ್ಷಗಳ ಹಿಂದೆ ಶ್ರೀ ಅನಂತ ತಡಸರ ಸೂಚನೆಯ ಮೇರೆಗೆ ಕಳಸ (ಧಾರವಾಡ ಜಿಲ್ಲೆ) ಎಂಬ ಗ್ರಾಮಕ್ಕೆ ದಾಸರ ಹಾಡುಗಳ ಹಸ್ತಪ್ರತಿ ಸಂಗ್ರಹಕ್ಕೆಂದು ಹೋಗಿದ್ದೆ. ಅದೊಂದು ಹಳ್ಳಿ. ನಾನು ಹುಡುಕಿಕೊಂಡು ಹೋದದ್ದು ಗೌಡ/ಪಾಟೀಲರ ಮನೆತನ. ಅವರ ಮನೆಯಲ್ಲಿ ಒಬ್ಬರಲ್ಲ ಮೂವರು ದಾಸರ ಹಾಡುಗಳ ಹಸ್ತಪ್ರತಿ ದೊರೆತುವು. ಅವುಗಳಿಂದ ಇದುವರೆಗೆ ಪ್ರಕಟವಾಗಿರದ ವಾದಿರಾಜ ಸ್ತುತಿಪರವಾದ ೨೫–೩೦ ಹಾಡುಗಳು ದೊರೆತವು. ಎತ್ತಿ ಹೇಳಬೇಕಾದ ಮಾತೆಂದರೆ, ಅಲ್ಲಿ ಬರೆಯಲಾಗಿದ್ದ ಇತರ ದಾಸರುಗಳ ಹಾಡುಗಳ ಪ್ರತಿಯೊಂದರ ಮೇಲೂ 'ಶ್ರೀ ಮದ್ಭಾವಿಸಮೀರ ವಾದಿರಾಜ ಗುರುಭ್ಯೋನಮಃ' ಎಂಬ ಒಕ್ಕಣಿಕೆ ಇದ್ದದ್ದು.

ಕಳಸದ ಆ ಮೂವರು ಹರಿದಾಸರಲ್ಲಿ ಮುಖ್ಯರೆಂದರೆ, ೧೯೦೦ರಲ್ಲಿ ಜನಿಸಿದ ಪ್ರಹ್ಲಾದಗೌಡರು. 'ತಂದೆ ವರದ ಗೋಪಾಲ ವಿಠ್ಠಲ' ಎಂಬ ಮುದ್ರಿಕೆಯಿಂದ ನೂರಕ್ಕೆ ಮಿಕ್ಕಿದ ಹಾಡುಗಳನ್ನು ರಚಿಸಿದ್ದಾರೆ. ಅವರ ತಂಗಿ ಕಳಸದ ಸುಂದರಮ್ಮ ದಾಸದೀಕ್ಷೆ ವಹಿಸಿದ್ದರು. ಅವಳ ಅಂಕಿತ 'ಕಾಳಿಮರ್ದನಕೃಷ್ಣ'. ಈ ಪ್ರಹ್ಲಾದಗೌಡರ ಕಿರಿಯ ಒಡನಾಟದ ನರಸಿಂಗರಾಯರೂ ದಾಸದೀಕ್ಷೆಯನ್ನು ವಹಿಸಿ 'ಗುರು–ತಂದೆ–ವರದ–ಗೋಪಾಲ–ವಿಠಲಾಂಕಿತ'ರಾಗಿ ಕೆಲವು ಹಾಡುಗಳನ್ನು ರಚಿಸಿದ್ದಾರೆ. (ವಾದಿರಾಜರನ್ನು ಕುರಿತ ಈ ಮೂರು ಹಾಡುಗಳು ಪ್ರಸ್ತುತ ಸಂಕಲನದಲ್ಲಿವೆ).

ಪ್ರಹ್ಲಾದಗೌಡರ ವಾದಿರಾಜ ಭಕ್ತಿಯ ಆಳ ಎಷ್ಟು ಎನ್ನುವುದಕ್ಕೆ ಒಂದು ಉದಾಹರಣೆ ಕೊಡಬೇಕೆನಿಸುವುದು. ಸೋದೆಯಲ್ಲಿರುವ ಧವಲಗಂಗಾದಲ್ಲಿ ಆಗ್ನೇಯ ದಿಕ್ಕಿಗೆ ಯಾರೂ ಸ್ನಾನಕ್ಕೆಂದು ಹೋಗುವುದಿಲ್ಲ. ಅದು ಭೂತರಾಜರ

ನೆಲೆಯಂತೆ. ಆದರೆ ಪ್ರಹ್ಲಾದಗೌಡರು ಅಲ್ಲಿಯೇ ಸ್ನಾನ ಮಾಡುತ್ತಿದ್ದಾಗ ಕಿರಿಯ ಮಿತ್ರ ನರಸಿಂಗರಾಯರು ಸೌಮ್ಯವಾಗಿ ಆಕ್ಷೇಪಿಸಿದರು. ಅದಕ್ಕೆ ಅವರು ನಸು ನಕ್ಕು ಸ್ನಾನವನ್ನು ಮುಂದುವರಿಸಿದರಂತೆ. ಇದರರ್ಥ, ಅವರು ಭೂತರಾಜರ ವಿಶೇಷ ಕೃಪೆಗೆ ಪಾತ್ರರಾಗಿದ್ದರೆಂದು ಹೇಳಬಹುದು. ಇದೇ ಕಾರಣವೋ ಏನೋ ಭೂತರಾಜರ ಮೇಲೆ ಅವರು ಒಂದು ಸುಳಾದಿಯನ್ನೇ ರಚಿಸಿದ್ದಾರೆ ('ಭೂತರಾಜನೆ ಕೇಳು'-ಪದ್ಯ ನಂ. ೧೧೭).

ವಾದಿರಾಜಾಚಾರ್ಯರು ತೀರಿಹೋದ ಮೇಲೆ ಅವರ ಮಗ ಬೆಳಗಾಂವಿಯಲ್ಲಿ ವಾದಿರಾಜ ಸೇವಾ ಪರಂಪರೆಯನ್ನು ಮುಂದುವರಿಸಿದರು. 'ಸ್ವಾಪ್ನವೃಂದಾವನಾಖ್ಯಾನ'ವನ್ನು ಮೊದಲಿಗೆ ಪ್ರಕಟಿಸಿದ್ದುದು (೧೯೨೯) ಅವರೇ. ಅವರ ನಿಕಟವರ್ತಿಗಳೆಂದರೆ ಶಿಷ್ಯ ವಾಳವೇಕರ ವೆಂಕಣ್ಣಾಚಾರ್ಯರು; ಈ ಆಚಾರ್ಯರ ಶಿಷ್ಯ ಶ್ರೀ ಜಿ. ಜಿ. ಪುರಾಣಿಕರು; ಹೀಗೆ ವಾದಿರಾಜ ನಿಷ್ಠೆ ಬೆಳೆಯುತ್ತ ಸಾಗಿದೆ. ವೆಂಕಣ್ಣಾಚಾರ್ಯರು ಬೆಳಗಾಂವಿಯಲ್ಲಿ 'ವೀಣಾಪಾಣಿ ಪ್ರಾಣದೇವರ' ಪ್ರತಿಷ್ಠಾಪನೆ ಮಾಡಿದ್ದಾರೆ. (೧೯೩೨). ಸೋದೆಯಲ್ಲಿ ಶ್ರೀ ವಾದಿರಾಜರು ಪ್ರತಿಷ್ಠಾಪಿಸಿದ್ದ ಇಂಥದೇ ಮೂರ್ತಿಯಿಂದ ಅವರಿಗೆ ಪ್ರಚೋದನೆ ದೊರೆತಿರಬೇಕಲ್ಲವೆ.

**ಕೆಲವು ಕುರುಹುಗಳು**

ದೇವರ ಮೂರ್ತಿಯ ಪ್ರಸಕ್ತಿ ಬಂತೆಂದು ಇದೊಂದು ಸಂದರ್ಭವನ್ನು ಹೇಳಬೇಕು. ಹಿಂದೊಮ್ಮೆ ರಾಯಚೂರು ಜಿಲ್ಲೆಯ ಲಿಂಗಸುಗೂರಿಗೆ ಹೋಗಿದ್ದೆ. ದಾಸ ಸಾಹಿತ್ಯದ ಆದಿಮ ಪ್ರವರ್ತಕರಲ್ಲೊಬ್ಬರಾದ ಗೊರಾಬಾಳು ಹನುಮಂತ-ರಾಯರ ಮನೆ ಅಲ್ಲಿದೆ. ನಾನು ಆ ಮನೆಗೆ ಹೋದಾಗ ಅವರ ಮೊಮ್ಮಗ ಪೂಜೆ ಮಾಡುತ್ತಿದ್ದುದನ್ನು ನೋಡುತ್ತ ನಿಂತಿದ್ದೆ. ದೊಡ್ಡ ತಾಬಾಣದ ತುಂಬ ಸಾಲಿಗ್ರಾಮಗಳು

ಹಾಗೂ ದೇವತಾಮೂರ್ತಿಗಳಿಗೆ ಅಭಿಷೇಕ ನಡೆದಿತ್ತು. ಅವುಗಳಲ್ಲಿ ಒಂದು ಸಾಲಿಗ್ರಾಮವನ್ನು ಎತ್ತಿ ಹಿಡಿದು ಆತ,

"ಇದನ್ನು ಏಳು ತಲೆಮಾರುಗಳ ಹಿಂದೆ ಶ್ರೀ ವಾದಿರಾಜ ಗುರುಗಳು ಕುಪ್ಪಣ್ಣ ಎಂಬ ನಮ್ಮ ಹಿರಿಯರಿಗೆ ಕೊಟ್ಟಿದ್ದರಂತೆ" ಎಂದು ವಿವರಿಸಿದರು. ಶ್ರೀ ವಾದಿರಾಜರು ತಮ್ಮ ಸಂಚಾರದಲ್ಲಿ ಲಿಂಗಸುಗೂರಿನ ತನಕ ಬಂದಿದ್ದಾಗ, ಅವರು ಸತ್ಕಾರ ಮಾಡಿದ್ದರು. ಅದರಿಂದ ಪ್ರೀತರಾದ ಶ್ರೀ ವಾದಿರಾಜರು ಆ ಸಾಲಿ ಗ್ರಾಮವನ್ನು ಅನುಗ್ರಹಿಸಿದ್ದರಂತೆ. ಹೇಗೂ ಸರಿಯೇ; ನಮ್ಮ ಗುರುಗಳ ಪ್ರಭಾವದ ವಿಸ್ತರಣೆಯ ನಿದರ್ಶನವೆಂದೇ ಇದನ್ನು ಬಗೆಯಬೇಕು.

ಇಂಥ ಕುರುಹುಗಳು ಬೇರೆ ಕಡೆಗೂ ಲಭ್ಯವಿವೆ. ಮೈಸೂರಿನ ಜಯನಗರ ಬಡಾವಣೆಯಲ್ಲಿರುವ ಶ್ರೀ ಗುರುರಾಜ ರಾವ್ ಎಂಬವರಲ್ಲಿ, ಶ್ರೀ ವಾದಿರಾಜರು ಸ್ವತಃ ಉಪಯೋಗಿಸುತ್ತಿದ್ದ ಪಾದುಕೆಗಳಿರುವುದಾಗಿಯೂ, ಅವನ್ನು ಭಕ್ತಿಭಾವದಿಂದ ಪೂಜಿಸುವುದಾಗಿಯೂ ತಿಳಿದು ಬಂತು. ಕೊಚ್ಚಿ ಮಹಾರಾಜರು ಶ್ರೀ ವಾದಿರಾಜರಿಗೆ ಅರ್ಪಿಸಿದ್ದ ಚಿನ್ನದ ಪಂಚವೃಂದಾವನವು ಉದ್ಯಾದಿವರದಲ್ಲಿ ಒಂದೆಡೆ ನೋಡಲು ಸಿಗುತ್ತದಂತೆ. ಅದರಂತೆ ನಾರಳಮಠದಲ್ಲಿ ಭೂತರಾಜರಿಗೆ ಸಂಬಂಧಿಸಿದ ಕುರುಹುಗಳೂ ಇವೆಯೆಂದು ಕೇಳಿದ್ದೇನೆ. ಇವೆಲ್ಲ ಬಾಹ್ಯ ಸ್ಥಳಗಳ ಕುರುಹುಗಳು. ಶ್ರೀ ವಾದಿರಾಜರ ಪ್ರಭಾವದ ಹಬ್ಬುಗೆಗೆ ನಿದರ್ಶನಗಳೆಂಬ ಕಾರಣದಿಂದ ಗಣನೀಯವಾಗಿವೆ.

ಇದೇ ಶತಮಾನದ ಪೂರ್ವಾರ್ಧದಲ್ಲಿ ಶ್ರೀ ವಾದಿರಾಜ ಮಹೋನ್ನತಿಯ ದ್ಯೋತಕವೆಂದು ಎರಡು ಸಂದರ್ಭಗಳನ್ನು ಪ್ರಾಸಂಗಿಕವೆಂದು ಹೇಳಬಹುದು. ಒಂದು, ಉತ್ತರಾದಿ-ಮಠದ ಮೂಲರಾಮದೇವರ ಪೂಜೆ ಮುಗಿದು ಭುಜಂಗಿಸುವಾಗ, ಶ್ರೀ ವಾದಿರಾಜ ಕೃತ ದಶಾವತಾರ ಸ್ತೋತ್ರವನ್ನು ತಪ್ಪದೇ ಹೇಳುತ್ತಾರೆ. ನನಗೆ ಗೊತ್ತಿದ್ದ ಮಟ್ಟಿಗೆ ಶ್ರೀ

ಸತ್ಯಧ್ಯಾನರ ಕಾಲದಿಂದ ನಡೆದುಕೊಂಡು ಬಂದ ಕ್ರಮವಿದು. ಈಚೆಗೆ ವೃಂದಾವನಸ್ಥರಾದ ಶ್ರೀ ಸತ್ಯಪ್ರಮೋದತೀರ್ಥರು ಸೋದೆಯಲ್ಲಿಯ ಒಮ್ಮೆ ಚಾತುರ್ಮಾಸಕ್ಕೆ ಕುಳಿತು ಶ್ರೀ ವಾದಿರಾಜರ ವೃಂದಾವನದ ಸಮ್ಮುಖದಲ್ಲಿ ಅವರ ಸುಪ್ರಸಿದ್ಧ 'ಯುಕ್ತಿಮಲ್ಲಿಕಾ ಗ್ರಂಥ'ಕ್ಕೆ ಟಿಪ್ಪಣಿಯನ್ನು ಬರೆದದ್ದು ತಿಳಿದ ವಿಷಯವೇ ಆಗಿದೆ.

**ಅಕಡೆಮಿಕ್ ಕ್ಷೇತ್ರಗಳಲ್ಲಿ**

ಅಕಡೆಮಿಕ್ ಎಂದರೆ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಶ್ರೀ ವಾದಿರಾಜರ ಕೃತಿಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದವರು ಅಲ್ಲಲ್ಲಿ ಕಂಡು ಬರುತ್ತಾರೆ. ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರೊಫೆಸರ್ ಡಿ. ಎನ್. ಶಾನಭಾಗರು ಒಬ್ಬ 'ಅಥಾರಿಟಿ' ಎನಿಸುವಷ್ಟು ಆಳವಾಗಿ ವಾದಿರಾಜರ ಗ್ರಂಥಗಳನ್ನು ವ್ಯಾಸಂಗ ಮಾಡಿದವರು. ಅವರ ಮಾರ್ಗದರ್ಶನದಲ್ಲಿ ಧಾರವಾಡದ ಡಾ|| ತಡಕೋಡ ಎನ್ನುವವರು "ರುಕ್ಮಿಣೀಶ ವಿಜಯ"ದ ಮೇಲೆ ಪಿ.ಎಚ್‌ಡಿ. ಪ್ರಬಂಧವನ್ನು ಸಾದರಪಡಿಸಿದರು. ಡಾ|| ಎಚ್. ಜಿ. ಲೋಕೂರರಂತೂ ಶ್ರೀ ವಾದಿರಾಜರ ಸಮಗ್ರ ಅಧ್ಯಯನ ಮಾಡಿ ಡಾಕ್ಟರೇಟ್ ಪಡೆದವರು.

ವಿದೇಶಗಳಲ್ಲಿಯೂ ಶ್ರೀ ವಾದಿರಾಜರ ಪ್ರಭಾವ ಹಬ್ಬಿದ್ದುದು ಹೆಮ್ಮೆಯ ಮಾತಾಗಿದೆ. ಕಳೆದ ಶತಮಾನದ ಕಾಲದಿಂದ ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್ ಮತ್ತು ಅಮೇರಿಕೆಗಳಲ್ಲಿ ಸಂಸ್ಕೃತ ಕೃತಿಗಳ ವ್ಯಾಸಂಗಕ್ಕೆ ಮನ್ನಣೆ ದೊರೆಯಿತಷ್ಟೆ. ಅಲ್ಲಿ ಶ್ರೀ ವಾದಿರಾಜರ ಕೃತಿಗಳನ್ನು ಅಭ್ಯಾಸ ಮಾಡಿದವರಿದ್ದಾರೆ. ಲೇಖನಗಳನ್ನೂ ಬರೆದಿರಲು ಸಾಕು. ಒಂದನ್ನು ಮಾತ್ರ ಕಾಣಿಸುವೆ. ಬೆಟ್ಟಿ ಸ್ಟ್ಯಾಫರ್ಡ್ ಎನ್ನುವ ಮಹಿಳೆ ಶ್ರೀ ವಾದಿರಾಜರ 'ನ್ಯಾಯ ರತ್ನಾವಳಿ'ಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪ್ರಬಂಧ ಬರೆದಿದ್ದಾಳೆ.

ಅಬ್ದುಸ್ ಸಲಾಮ್ ಎನ್ನುವ ಓರ್ವ ವಿಜ್ಞಾನಿಗೆ ನೋಬಲ್ ಬಹುಮಾನ ಸಂದಿತು. ಅವರು ಪಾಕಿಸ್ತಾನದವರು. ೧೯೭೪ರಲ್ಲಿ ಎಂದು ಕಾಣುತ್ತದೆ, ಮುಂಬಯಿಯ ಟಿ.ಐ. ಎಫ್.ಆರ್. ಎಂಬ ವಿಜ್ಞಾನ ಸಂಸ್ಥೆಯಲ್ಲಿ ಭಾಷಣ ಮಾಡುವಾಗ ತಾವು ಶ್ರೀ ವಾದಿರಾಜರ ಕೆಲವು ಕೃತಿಗಳನ್ನೂ ಅಭ್ಯಾಸ ಮಾಡಿದ್ದಾಗಿಯೂ, ವಿಶೇಷತಃ ತಮಗೆ ರುಕ್ಮಿಣೀಶ ವಿಜಯವೂ, ಬ್ರಹ್ಮಸೂತ್ರದ ಮೇಲಿನ ಶ್ರೀ ಮಧ್ವಾಚಾರ್ಯರ ಭಾಷ್ಯಕ್ಕೆ ಶ್ರೀವಾದಿರಾಜರು ಬರೆದ ಟಿಪ್ಪಣಿಯೂ ಮೆಚ್ಚಿಕೆ ಯಾಯಿತೆಂಬ ಮಾತನ್ನು ಹೇಳಿದರಂತೆ. (ಆ ದಿನ ಅದನ್ನು ಕೇಳಿಸಿಕೊಂಡವರು ಮಿತ್ರರಾದ ಶ್ರೀ ಬಿ. ಟಿ. ಆಚಾರ್ಯರು) ಅಬ್ದುಸ್ ಸಲಾಮ್ ಮುಸ್ಲಿಮರು; ಮೇಲಾಗಿ ಅವರ ವಿಷಯ, ವಿಜ್ಞಾನ! ಅವರು ಸಂಸ್ಕೃತದಲ್ಲಿ ಆಸಕ್ತಿ ತಳೆದದ್ದರಲ್ಲಿಯಾದರೂ ಅಸಂಭವನೀಯತೆ ಇಲ್ಲ. ಆದರೆ ಶ್ರೀ ವಾದಿರಾಜರ ಕೃತಿಗಳಲ್ಲಿ ಒಲವನ್ನು ತೋರಿದುದು ಆಶ್ಚರ್ಯಕರವೇ ಸೈ.

ಫೆಬ್ರವರಿ, ೧೯೯೮ —ಶ್ರೀನಿವಾಸ ಹಾವನೂರ

## ದಾಸವರ್ಯರ ಸೂಚಿ

(ಅವರ ಕೃತಿಗಳ ಅನುಕ್ರಮ ಸಂಖ್ಯೆಯೊಡನೆ)

| | |
|---|---|
| ಅನಂತವಿಠಲ (ಅನಂತಸ್ವಾಮಿರಾವ್) | ೫೮, ೫೯ |
| ಅಭಿನವಜನಾರ್ದನವಿಠಲ (ಪ್ರೇಮದಾಸ) | ೩೧, ೩೪ |
| ಅರವಿಂದನಾಭವಿಠಲ (ಚಂಜ ಧ್ರುವರಾವ್) | ೬೦ |
| ಇಂದಿರೇಶ (ಬೆಟ್ಟದ ಹುಚ್ಚಾಚಾರ್ಯ) | ೩೮ |
| ಕಮಲೇಶವಿಠಲ (ಸುರಪುರದ ಆನಂದದಾಸ) | ೩೭ |
| ಕರಿಗಿರೀಶ (ವರವಣಿ ರಾಮರಾವ್) | ೬೨, ೭೧ |
| ಕಾರ್ಪರ ನರಹರಿ (ಕೊಪ್ಪರ ಗಿರಿಯಾಚಾರ್) | ೩೯ |
| ಕಾಳಿಮರ್ದನಕೃಷ್ಣ (ಕಳಸದ ಸುಂದರಮ್ಮ) | ೬೩, ೬೪ |
| ಕೃಷ್ಣವಿಠಲ – ಶ್ರೀನಿವಾಸ (ಭೀಮರಾವ್) | ೬೫, ೬೮, ೧೧೬ |
| ಗಿರಿಬಾಲೆವರದ (ಸರಸ್ವತಿಬಾಯಿ ರಾಜವಾಡೆ) | ೬೯ |
| ಗುರುಗೋವಿಂದವಿಠಲ – (ಎಂ. ಜಿ. ಗೋವಿಂದರಾವ್) | ೭೦, ೭೭, ೧೦೮ |
| ಗುರುಜಗನ್ನಾಥ ವಿಠಲ – (ಕೋಸಗಿ ಸ್ವಾಮಿರಾಯಾಚಾರ್ಯ) | ೨೫, ೨೯ |
| ಗುರುತಂದೆವರದಗೋಪಾಲವಿಠಲ (ನರಸಿಂಗರಾವ್) | ೮೦, ೧೦೬, ೧೧೦ |
| ಗೋಪತಿವಿಠಲ (ಗೋಪಾಲರಾವ್ ಅಣ್ಣೀಗೇರಿ) | ೪೦ |

---

ತುಂಗಭದ್ರೆಯ ದಡದಲ್ಲಿರುವ ನಮ್ಮ ಹಾವನೂರ ಗ್ರಾಮದಲ್ಲಿ ಶ್ರೀ ವಾದಿರಾಜ ಮೃತ್ತಿಕಾವೃಂದಾವನವನ್ನು ಯಾರು ಮತ್ತು ಯಾವಾಗ ಸ್ಥಾಪಿಸಿದರೋ ತಿಳಿಯದು. ಸುಮಾರು ೧೨೦ ವರ್ಷಗಳ ಹಿಂದೆ ಸ್ಥಾಪಿತವಾಗಿದ್ದು, ಕೇವಲ ಬೆರಳೆಣಿಕೆ ಯಷ್ಟಿರುವ ಶ್ರೀ ವಾದಿರಾಜೀಯ ಮೃತ್ತಿಕಾ ವೃಂದಾವನಗಳಲ್ಲಿ ಇದು ಪ್ರಾಚೀನವಾದದ್ದೆಂಬುದರಲ್ಲಿ ಸಂದೇಹವಿಲ್ಲ. ಆರು ದಶಕಗಳ ಹಿಂದೆ ಸುಪ್ರಸಿದ್ಧ ಬೆಳಗಾಂವಕರ ಮನೆತನದವರು ನಮ್ಮ ತಂದೆ ಶ್ರೀ ಗಲಗಲಿ ನರಸಿಂಹಾಚಾರ್ಯರಿಗೆ ಪೂಜಾದಿ ಸೇವೆಯನ್ನು ನಡೆಸಿಕೊಂಡು ಹೋಗಲು, ಬಿಟ್ಟುಕೊಟ್ಟದ್ದರ ದಾಖಲೆ ಇದೆ. ನಮ್ಮ ಪೂಜ್ಯ ತಂದೆಯವರು ಆಜೀವ ಪರ್ಯಂತ, ಎಂದರೆ ೧೯೯೧ರವರೆಗೆ ಶ್ರೀ ಗುರುಗಳ ಸೇವೆ ಮಾಡಿದ್ದು ನಾವು ಅದನ್ನು ಮುಂದುವರಿಸಿಕೊಂಡು ಬಂದಿದ್ದೇವೆ.

ಎರಡು ಬಾರಿ, ಎಂದರೆ ೧೯೬೪ ಹಾಗೂ ೧೯೯೩ರಲ್ಲಿ ಶ್ರೀಮಠದ ಜೀರ್ಣೋದ್ಧಾರ ಹಾಗೂ ವಿಸ್ತರಣೆಯನ್ನು ಕೈಕೊಂಡದ್ದಾಗಿದೆ. ೧೯೯೩ರಲ್ಲಿ ಶ್ರೀ ವಿದ್ಯಾಭೂಷಣರು (ಸುಬ್ರಹ್ಮಣ್ಯ ಮಠದ ಮುನ್ನಿನ ಯತಿಗಳು) ನಿಧಿಸಂಗ್ರಹಣೆಗಾಗಿ ಸಂಗೀತ ಕಾರ್ಯಕ್ರಮವನ್ನು ಕೊಟ್ಟದ್ದನ್ನು ಸ್ಮರಿಸುವೆವು.

ಈ ಮಧ್ಯೆ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರು ಹಾಗೂ ಕೂಡಲಿ ಶ್ರೀ ಅಕ್ಷೋಭ್ಯತೀರ್ಥ ಶ್ರೀಗಳವರು ಇಲ್ಲಿಯ ಮಠವನ್ನು ಸಂದರ್ಶಿಸಿ ಸಂತೋಷವನ್ನು ವ್ಯಕ್ತಪಡಿಸಿ ನಮ್ಮನ್ನು ಆಶೀರ್ವದಿಸಿದ್ದಾರೆ.

ಫಾಲ್ಗುಣ ವದ್ಯ ತೃತೀಯೆಯಂದು ನಡೆಯುವ ಆರಾಧನೆಯ ಕಾಲಕ್ಕೆ ಹೋಮ-ಹವನ, ಪ್ರವಚನ, ಭಕ್ತಿಸಂಗೀತಾದಿ ಕಾರ್ಯಕ್ರಮಗಳನ್ನು ಪ್ರತಿ ವರ್ಷ ವೈಭವದಿಂದ ನಡೆಸಿಕೊಂಡು ಬರುವಂತೆ ಶ್ರೀ ವಾದಿರಾಜರು ಅನುಗ್ರಹಿಸಿದ್ದು ನಮ್ಮ ಭಾಗ್ಯ.

"ಹರಿದಾಸರು ಹೊಗಳಿ ಹಾಡಿದ ಶ್ರೀ ವಾದಿರಾಜರು" ಈ ಪುಸ್ತಕವನ್ನು ನಮ್ಮ ಹಿರಿಯ ಅಣ್ಣನವರೇ ಸಂಪಾದಿಸಿದ್ದು ಇದು ನಮ್ಮ ಮೊದಲನೆಯ ಪ್ರಕಟಣೆಯಾಗಿದೆ.

-ಗಲಗಲಿ ಬಂಧುಗಳು

# ಹಾಡುಗಳ ಪರಿವಿಡಿ

## (ಅ) ದೇವತಾ, ಗುರು ಸನ್ನಿಧಿಯ ಹಾಡುಗಳು



## (ಆ) ಯತಿಗಳು ಸ್ತುತಿಸಿದ ಶ್ರೀ ವಾದಿರಾಜರು

## (೩) ಹಿರಿಯ ತಲೆಮಾರಿನ ಹರಿದಾಸರ ಹಾಡುಗಳು (ಕಾಲಾನುಕ್ರಮದಲ್ಲಿ)

**ಪ್ರಸನ್ನವೆಂಕಟ**

೧೨. ಶ್ರೀ ವಾದಿರಾಜ ಸಲಹೆನ್ನ ರಾಜ

**ವಿಜಯವಿಠ್ಠಲ**

೧೩. ಗುರುರಾಜರಿರುವ ಸಂಭ್ರಮ

೧೪. ಗುರು ವಾದಿರಾಜಯತಿಯ

೧೫. ಗುರು ವಾದಿರಾಜ ರವಿಕೋಟಿತೇಜ

೧೬. ಮಾಧವನಂಘ್ರಿ ನಿತ್ಯ ಮೋದದಿಂದಲಿ (ಸುಳಾದಿ)

೧೭. ವಾದಿರಾಜ ಧೀರ ವಾದದಲಿ ಶೂರ

**ಗೋಪಾಲವಿಠ್ಠಲ**

೧೮. ವಾದಿರಾಜ ಮುನಿಪ ಹಯಮುಖ

**ವೇಣುಗೋಪಾಲವಿಠಲ**

೧೯. ವಾದಿರಾಜನೆ ನಿನ್ನ ಪಾದಕ್ಕೆರಗಿ ನಾ

೨೦. ಸಂತೈಸು ತವ ದಾಸನೆಂದೆನ್ನನು

**ಜಗನ್ನಾಥವಿಠಲ**

೨೧. ವಾದಿರಾಜ ಅಸ್ಮದ್ಗುರು ವಾದಿರಾಜ

೨೨. ವಾದಿರಾಜ ಗುರು ನೀ ದಯಮಾಡದೆ

೨೩. ವಾದಿರಾಜ ಪ್ರತಿವಾದಿ ಗಜೇಂದ್ರ

೨೪. ಶರಣು ಶರಣಯ್ಯ ಶರಣು ಶ್ರೀಗುರು ವಾದಿರಾಜರಿಗೆ

**ಗುರುಜಗನ್ನಾಥವಿಠಲ**

೨೫. ರಾಜರ ನೋಡಿರೈ ಇನತತಿತೇಜರ

೨೬. ವಾದಿರಾಜ ನಿಜ ಮೋದ ನೀಡುವ

೨೭. ವಾದಿರಾಜ ಪಾಲಿಸು ಎನ್ನ

೨೮. ಶರಣು ಹೊಕ್ಕೆನು ನಿನ್ನ

೨೯. ಸೋದಾಪುರದಲಿ ನಿಂತು ರಾಜಿಪನ್ಯಾರೆ

**ಶ್ರೀದವಿಠಲ**

೩೦. ರಾಜರ ಭಾಗ್ಯವಿದು ಸ್ವಾದಿರಾಜರ

**ಅಭಿನವಜನಾರ್ದನವಿಠಲ**

೩೧. ಜಯ ಜಯ ಶ್ರೀ ವಾದಿರಾಜ

೩೨. ಮಂಗಳಂ ಮಂಗಳಂ ವಾದಿರಾಜನ

೩೩. ವಾದಿರಾಜ ಪಾಲಿಸೊ ಎನ್ನ

೩೪. ವಾದಿರಾಜ ವಾದಿರಾಜ ಗುರುವೆ

**ಬಾದರಾಯಣವಿಠಲ**

೩೫. ದಿಕ್ಕೂದೆಸೆ ನೀನೆ ಗುರುವಾದಿರಾಜ

೩೬. ಸೋದಾಪುರದಲಿ ಮನೆಮಾಡಿದ ಮುನಿವರ

**ಕಮಲೇಶವಿಠ್ಠಲ**

೩೭. ನಿಜಕೈರವ ದ್ವಿಜರಾಜ ಜಯ

## (ಈ) ಹತ್ತೊಂಬತ್ತನೆಯ ಶತಮಾನದ ಹರಿದಾಸರ ಹಾಡುಗಳು

**ಇಂದಿರೇಶ (ಬೆಟ್ಟದ ಹುಚ್ಚಾಚಾರ್ಯ)**

೩೮. ವಾದಿರಾಜಗುರು ದಯಮಾಡೊ

**ಕಾರ್ಪರ ನರಸಿಂಹ**

೩೯. ವಾದಿರಾಜ ಗುರುವೇ ಪಾದಾರಾಧಕ ಸುರತರುವೇ

**ಗೋಪತಿವಿಠ್ಠಲ**

೪೦. ವಾದಿರಾಜ ಗುರುರಾಜರ ಕೊಂಡಾಡಿ

**ಗೋವಿಂದವಿಠಲ**

೪೧. ವಾದಿರಾಜ ವಾದಿರಾಜ ವಾದಿರಾಜ ಪಾಹಿಮಾಂ

**ತಂದೆ ಶ್ರೀಪತಿವಿಠಲ**

೪೨. ವಾದಿರಾಜ ಗುರುವೆ ಭಕುತಿಯಿಂದಲಿ ನಿಮ್ಮ

**ತುಪಾಕಿ ವೆಂಕಟರಮಣಾಚಾರ್ಯ** (ವೆಂಕಟಪತಿ)

೪೩. ಬರಿದೆ ಮೋಹದೊಳು ಬೆರೆದೆ

೪೪. ಭಾವಿ ಭಾರತಿವರದ

**ನಿಜಪುರಂದರವಿಠಲ**

೪೫. ಕಂಡೆ ಕಂಡೆ ರಾಜರ ಕಂಡೆ

೪೬. ಸೋದಾಕ್ಷೇತ್ರದಿ ನೆಲಸಿಹ ಯತಿವರರ್‍ಯಾರೆ

೪೭. ಹೊಡಿ ನಗಾರಿ ಮೇಲೆ ಕೈಯ

**ಬಾಳೆಹಳ್ಳಿ ರುದ್ರಾಕ್ಷಿ ಒಡೆಯ**

೪೮. ವಾದಿರಾಜನ ಕೂಡೆ ವಾದವ್ಯಾತಕೊ

**ಭೀಮೇಶಕೃಷ್ಣ**

೪೯. ನೋಡಿ ದಣಿಯವೆನ್ನ ಕಂಗಳು.

**ಮುದ್ದುಕೃಷ್ಣ**

೫೦. ವಾದಿಗಳೆಲ್ಲರನೇ ಗೆದ್ದ ವಾದಧೀರನೆ

**ಮುದ್ದುಹಯವದನ**

೫೧. ಮುನಿಯೆ ನಿನ್ನ ಬಲವೆನಗೆ ಮುಖ್ಯ ಬಲವೊ

**ರಘುಪತಿವಿಠಲ**

೫೨. ವಾದಿರಾಜ ಮದ್ಗುರುರಾಯ

**ರಮಾಪತಿವಿಠಲ**

೫೩. ಕರುಣದಿ ನೋಡೊ ಮದ್ಗುರು ವಾದಿರಾಜ

**ವೆಂಕಟವಿಠಲ**

೫೪. ಇದಿರ್‍ಯಾರೊ ಗುರುವೆ ಸಮರ್‍ಯಾರೋ

೫೫. ವಂದಿಸುವೆನು ವಾದಿರಾಜನೆ.

**ಶ್ರೀಪತಿವಿಠಲ**

೫೬. ವಾದಿರಾಜ ಕರುಣೋದಧಿ ನಿನ್ನಯ

**ಸಿರಿಕೃಷ್ಣ**

೫೮. ಅವತರಿಸಿದ ಋಜುಗಣ ಮಹಾರಾಜ

## (ಉ) ಇಪ್ಪತ್ತನೆಯ ಶತಮಾನದ ಹರಿದಾಸರ ಹಾಡುಗಳು

**ಅನಂತವಿಠಲ**

೫೮. ಗುರು ವಾದಿರಾಜರ ಪಾದಭಜಿಪರ ದುರಿತ

೫೯. ವಾದಿರಾಜಮುನಿಪ ವಂದಿಪ ಭಕುತ ಕುಮುದ ಉಡುಪ

**ಅರವಿಂದನಾಭವಿಠಲ**

೬೦. ವಾದಿರಾಜರ ಪಾದ ಮೋದದಿ ಭಜಿಸುವ

**ಕರಿಗಿರೀಶ**

೬೧. ಗುರುವಾದಿರಾಜರ ಸ್ಮರಣೆಯನು ಮಾಡಿರೊ
೬೨. ಶರಣು ಶರಣು ವಾದಿರಾಜ ಶರಣಜನರ ಕಲ್ಪಭೂಜ

**ಕಾಳಿಮರ್ದನಕೃಷ್ಣ**

೬೩. ವ್ಯಾಧಿಯನೆ ಪರಿಹರಿಸು ಗುರು ವಾದಿರಾಜಾ
೬೪. ಸಾಗಿ ಬಾರಯ್ಯ ಗುರು ವಾದಿರಾಜೇಂದ್ರಾರ್ಯ

**ಕೃಷ್ಣವಿಠಲ (ಶ್ರೀನಿವಾಸ)**

೬೫. ಭಾವಿಭಾರತಿರಮಣ ಶ್ರೀಮದ್ವಾದಿರಾಜ ಪ್ರಭೊ
೬೬. ಬೇಡುವೆ ನಿನ್ನನೆ ಶ್ರೀಹರಿ ದಯಮಾಡಿ ನೀಡಿದನೆ
೬೭. ವಾದಿರಾಜ ಗುರು ನೀ ಕೈಯಬಿಟ್ಟರಿನ್ಯಾರೆನ್ನೆ
೬೮. ಸಂತಸಖಿ ಬಾರೆ ನಾವ್ ಪೋಗುವಾ ಕುಣಿದಾಡುವಾ

**ಗಿರಿಬಾಲೆವರದ**

೬೯. ನಂಬಿರಿ ಸೋದೆರಾಜರ ಚರಣವ

**ಗುರುಗೋವಿಂದವಿಠಲ**

೭೦. ಕೃಪೆಯಲಿಂದಲಿ ಕಾಯಬೇಕಯ್ಯ
೭೧. ದಯದಿ ಪಾಲಿಸೋ ವಾದಿರಾಜ ಗುರುವೇ
೭೨. ಪಂಚ ವೃಂದಾವನದಿ ಮೆರೆಯುತಿರುವಾ
೭೩. ಪೊಂದಿ ಬದುಕಿರೊ ನಿತ್ಯ ಮಂದಾರ ತರುವಂತೆ
೭೪. ವಾದಿರಾಜ ಗುರುಸಾರ್ವಭೌಮ ದುರ್ವಾದಿ ವಿಭಂಜನ
೭೫. ವಾದಿರಾಜರ ಪಾದ ಮೋದದಿ ಭಜಿಸಿದ ಮನುಜನೇ
೭೬. ಸಾಧನಕೆ ಸಾಧನಾಖ್ಯಾನಾ ವೃಂದಾವನಾ
೭೭. ಸೋದೆರಾಜರ ಭಜಿಸೊ ಮಾನವ ನೀನು

**ಜಯೇಶವಿಠ್ಠಲ**

೭೮. ವಾಜಿವದನಾರ್ಚಕ ಶ್ರೀವಾದಿರಾಜ ರಾಜೀವನಯನ.....

**ತಂದೆವರದಗೋಪಾಲವಿಠ್ಠಲ**

೭೯. ವಾಸದೇವನ ದಾಸ ವಾಸುಕೀಭರಣ

**ಗುರುತಂದೆವರದಗೋಪಾಲವಿಠ್ಠಲ**

೮೦. ವಾಜಿವದನಾರ್ಚಕ ಶ್ರೀ ವಾದಿರಾಜಾ ವಾದಿಮಸ್ತಕ ಶೂಲ

**ಗುರುರಾಜಾಚಾರ್ಯ (ಎಸ್.ಎನ್.)**

೮೧. ನಮೋ ನಮೋ ಶ್ರೀ ವಾದಿರಾಜ

**ತಂದೆವೆಂಕಟೇಶವಿಠ್ಠಲ**

೮೨. ವಾಜೀವದನ ಪದ ರಾಜೀವ ಭ್ರಮರ

೮೩. ವಾದಿರಾಜನ ಪಾದವ ಭಜಿಸಿ

೮೪. ವಾದಿರಾಜರ ಭಜಿಸಿರೋ

**ನಾಗಶಯನವಿಠಲ**

೮೫. ವಾದಿರಾಜ ಗುರುವೇ ಭಜಿಪರ ಆದಿವ್ಯಾಧಿ ಕಳೆವೆ

**ಪಂಢರಿನಾಥವಿಠಲ**

೮೬. ಭೂತರಾಜನಯ್ಯ ವಂದಿಪೆ ವಾದಿರಾಜ ಜೀಯ

೮೭. ವಾದಿರಾಜರ ಪಾದ ಪದುಮ ಭಜಿಸೊ

೮೮. ಸ್ಮರಣೆ ಮಾಡಿರೊ ಸೋದೆ ವಾದಿರಾಜರ

**ಪ್ರೇಮಕೃಷ್ಣ**

೮೯. ನೋಡಿದೆ ಗುರುರಾಜನ ನೋಡಿದೆ

೯೦. ರಥವಾನೇರಿದಾ ವಾದಿರಾಜೇಂದ್ರ

**ಫಣಿಶಾಯಿವಿಠಲ**

೯೧. ಗುರುವೇ ನೀ ಕರುಣಿಸದೆ ನಿರಾಕರಿಸಲು ಎನ್ನ

೯೨. ನೋಡಿದೆ ರಾಜರ ನೋಡಿದೆ

೯೩. ಪರಿಪಾಹಿ ಗುರುರಾಜ ಶರಣರ ಪೊರೆಯುವ ಕವಿರಾಜ

೯೪. ವಾದಿರಾಜ ಗುರುವೇ ನೀ ಮೂಜಗದೊಳು ಪ್ರಖ್ಯಾತಾ

೯೫. ಶ್ರೀವಾದಿರಾಜ ಪಾಲಿಸೊ ನೀ ಎನ್ನ

೯೬. ಸರ್ವ ಇಷ್ಟಾರ್ಥಪದ ಶರ್ವ ವಂದ್ಯನ ಸ್ಮರಣೆ

**ಭೀಮಕವಿ**

೯೭. ಲಕ್ಷಾಭರಣದ ಭಾರತ

**ಶಾಮಸುಂದರಕೃಷ್ಣ**

೯೮. ವಂದಿಪೆ ಚರಣಾರವಿಂದಕೆ ಸದ್ಗುರು ವಾದಿರಾಜ

**ಶ್ರೀಮುದ್ದುವಿಠಲ**

೯೯. ಏಳು ಶ್ರೀ ಗುರುರಾಜ ಏಳು ವಾದೀರಾಜ

೧೦೦. ಕಂಗೊಳಿಪರು ನೋಡೆ ಸೋದೇ ವೃಂದಾವನದಿ

೧೦೧. ರತ್ನ ದೊರಕಿತೊ ಎನಗೆ

**ಅಂಕಿತ ಇಲ್ಲದವುಗಳು**

೧೦೨. ವಿಜಯಪ್ರದ ವಾದಿರಾಜ ಜಯ

೧೦೩. ಕೇಳಿರೊ ಜನರು ಈ ಮಹಿಮೆಯ ಪೊಗಳಿರೊ

೧೦೪. ಸ್ವಜನಾಂಬುಜ ಹರಿರಾಜ ಜಯ

## (ಊ) ವಿಶಿಷ್ಟ ಬಂಧದ ಪದಗಳು

**ಫಣಿಶಾಯಿವಿಠ್ಠಲ**

೧೦೫. ವೃಂದಾವನ ವೃಂದಾವನ ವೃಂದಾವನ

**ಗುರುತಂದೆವರದ ಗೋಪಾಲವಿಠ್ಠಲ**

೧೦೬. ಗುರುರಾಜ ಗುರುರಾಜ ನೀ ಕಲ್ಕಯಿಂದೊಂದಿತ

**ವರಾಹಹರಿವಿಠ್ಠಲ**

೧೦೭. ಶರಣು ನಿಮ್ಮ ಚರಣಗಳಿಗೆ

## (ಎ) ಮಂಗಳಾನ್ವಿತ ಪದ್ಯಗಳು

**ಗುರುಗೋವಿಂದವಿಠಲ**

೧೦೮. ಮಂಗಳ ಸೋದೆಯ ರಾಜರಿಗೆ

**ತಂದೆವರದಗೋಪಾಲವಿಠಲ**

೧೦೯. ಮಂಗಳ ಶ್ರೀ ಸ್ವಾದಿನಿಲಯನಿಗೆ

**ಗುರುತಂದೆವರದಗೋಪಾಲವಿಠಲ**

೧೧೦. ಮಂಗಳಾವೆನ್ನಿರೊ ಜಗಮಂಗಳ ನಾಯಕಗೆ

**ಪಂಢರಿನಾಥವಿಠಲ**

೧೧೧. ಮಂಗಳಂ ಗುರುವಾದಿರಾಜರಿಗೆ ವಾಗೀಶಕರಜಗೆ

**ಫಣಿಶಾಯಿವಿಠಲ**

೧೧೨. ಜಯಮಂಗಳಂ ನಿತ್ಯ ಶುಭಮಂಗಳಂ ವಾಗೀಶ-
ಕರಕಂಜಜಾತನಿಗೆ

೧೧೩. ಜೋ ಜೋ ಜೋ ಜೋ ಯತಿಕುಲತಿಲಕ

**ಮುದ್ದುಹಯವದನ**

೧೧೪. ಜಯಮಂಗಳಂ...ಮಂಗಳಂ ಹಯವದನ...

**ಸಿರಿಕೃಷ್ಣವಿಠಲ**

೧೧೫. ಮಂಗಳಂ ಮಂಗಳಂ ಶ್ರೀ ಗುರುರಾಜನಿಗೆ

## (ಏ) ಶ್ರೀ ಭೂತರಾಜ ಸ್ತುತಿಪರ ಹಾಡುಗಳು

**ಕೃಷ್ಣವಿಠಲ (ಶ್ರೀನಿವಾಸ)**

೧೧೬. ವಾದಿರಾಜರ ದೂತನೆನಿಸುವ

**ತಂದೆವರದಗೋಪಾಲವಿಠಲ**

೧೧೭. ಭೂತರಾಜನೆ ಕೇಳ

**ತಂದೆಶ್ರೀನರಹರಿ**

೧೧೮. ಭೂತರಾಜನ ಸ್ತುತಿಸಿ ಖ್ಯಾತಿಗೊಳ್ಳೊ

**ಶ್ರೀಮುದ್ದುವಿಠಲ**

೧೧೯. ಭೂತರಾಜ ನಮಿಪೆ

# (ಅ) ದೇವತಾ ಹಾಗೂ ಗುರುಸನ್ನಿಧಿಯ ಹಾಡುಗಳು

## ೧

## ಶ್ರೀ ಹಯಗ್ರೀವದೇವರು

('ರಾಗಿಯ ತಂದೀರಾ' ಎಂಬ ಪುರಂದರದಾಸರ ಹಾಡಿನ ಧಾಟಿಯಂತೆ)

ಕುದುರೇ ಕಂಡೀರಾ ಚೆಲುವ ಕುದುರೇ ಕಂಡೀರಾ
ಬಿಳೀ ಕುದುರೆ ಕಂಡೀರಾ ಪ.

ಮಧ್ವರಾಯರಿಗೊಲಿದ ಕುದುರೆ
ವಾದಿರಾಜರ ಪೊರೆದ ಕುದುರೆ
ಇಂದಿರಾದೇವಿಯನಪ್ಪಿದ ಕುದುರೆ
ಬಂದವರೆ ನರರು ಬೆದರವ ಕುದುರೆ ೧

ಮಂದರಗಿರಿಯಾನೆತ್ತಿದ ಕುದುರೆ
ಚಂದಿರನಂತೆ ಪೊಳೆವಾ ಕುದುರೆ
ಸೋದೇಪುರದೊಳಿರುವಾ ಕುದುರೆ
ಮೋದದಿಂದಾ ಮೆರೆವಾ ಕುದುರೆ ೨

ಸುರರಿಗಮೃತವಿತ್ತಾ ಕುದುರೆ
ನರನ ರಥವನೇರ್ದಾ ಕುದುರೆ
ಸ್ಮರನ ತಾತನೆನಿಪಾ ಕುದುರೆ
ಸುರತರುವನ್ನೇ ತಂದ ಕುದುರೆ ೩

ಕಡಲೆ ಹೂರಣ ಮೆಲುವ ಕುದುರೆ
ಪಂಢರಪುರದಿ ಮೆಯ್ದ ಕುದುರೆ
ಪುಂಡರೀಕನಿಗೊಲಿದ ಕುದುರೆ
ಪಾಂಡವರನ್ನು ಪೊರೆವ ಕುದುರೆ ೪

ಸುತ್ತಾಮುತ್ತಲೂ ಆಡುವ ಕುದುರೆ
ಮತ್ತೆ ವಾದಿಯಾ ಗೆಲ್ವಾ ಕುದುರೆ
ಶತ್ರುಗಳೆಲ್ಲರ ಒದೆವಾ ಕುದುರೆ
ತತ್ವ ಹಯವದನನ ಆಹಾ ಕುದುರೆ! ೫

**ರಾಜನಾಥ**ನೆನಿಪಾ ಕುದುರೆ
ವಾಜಿವದನೆನಿಪಾ ಕುದುರೆ
ಕಂಜಸುತಗೇ ಶೃತಿಯನಿತ್ತ
ಕಂಜನಾಭನೆನಿಪ ಕುದುರೆ ೬

---

**ಟಿಪ್ಪಣಿ :** ಶ್ರೀ ವಾದಿರಾಜರೇ ರಚಿಸಿದ "ಕುದುರೆ ಬಂದಿದೆ ಚೆಲುವಾ ಕುದುರೆ ಬಂದಿದೆ" ಎಂಬ ಹಾಡನ್ನೂ ಇಲ್ಲಿ ಗಮನಿಸಬಹುದು.

## ೨

## ಶ್ರೀ ತ್ರಿವಿಕ್ರಮದೇವರು

**ದೇವಾಧಿದೇವ ಶ್ರೀ ತ್ರಿವಿಕ್ರಮರಾಯ**
ದ್ಯಾವಾಭೂಮಿಯ ಮ್ಯಾಲ್ನಿನ್ನ ಕಾಯ
ಪಾದನಖಾಗ್ರದಿ ಬ್ರಹ್ಮಾಂಡವನ್ನು
ಭೇದಿಸಿ ಗಂಗೆಯ ಜನಿಸಿರ್ದ ಕಾಯ ಪ.

ಅಣುರೂಪದಿಂದಿದ್ದು ಕ್ಷಣದೊಳಗದ್ಭುತ
ರೂಪಾವ ಧರಿಸಿ ಬಲಿಯಾ ಬಂಧಿಸಿದಿ
ರಣಶಬ್ದವಿಲ್ಲದೆ ಸರ್ವ ಸಾಮ್ರಾಜ್ಯವ-
ನಗ್ರಜಗಿತ್ತಿಹ ಕಾರ್ಯವಾಶ್ಚರ್ಯ ೧

ವಾದಿರಾಜರಿಗೆ ನೀ ಒಲಿದು ಸೋದೆಯಲಿ
ನಿಂತಿದ್ದ ತೆರವತಿಚೋದ್ಯವಾಗಿಹುದು
ಕದನವೆ ಆಗಿಲ್ಲ ಭೂಭುಜರಲ್ಲಿ
ಒಲಿದುದು ಪರಿಭಕ್ತರ್ಗತಿ ತೋಷಕಾರ್ಯ ೨

ಕಂಜಾಕ್ಷ ಶ್ರೀಕೃಷ್ಣಗೋಲೆಯರ್ಪಿಸಿದ
**ರಾಜೇಶಹಯಮುಖ** ದಾಸರೆಂದೆನಿಪ
ರಾಜ್ಯದೊಳತಿಮಾನ್ಯ ವಾದಿರಾಜರ ಭಾಗ್ಯ
ದೇವಾಧಿದೇವ ಶ್ರೀತ್ರಿವಿಕ್ರಮರಾಯ ೩

## ೩
## ಅವತಾರತ್ರಯ

**ಭಾರತೀಶ ಮದ್ಧಾರ ನಿನ್ನದಯ್ಯ**
ಕರುಣದಿ ಪಿಡಿಯೊ ಕೈಯ್ಯಾ ಪ.

ಪೂರೈಸೆನ್ನ ಮನೋಭಿಲಾಷೆ
ಗುರುವೆ ಆಶ್ರಿತ ಸುರತರುವೆ ಅ.ಪ

ಹರಿಭಕ್ತಾಗ್ರೇಸರ ಹನುಮಂತಾ
  ಹರನುತ ಬಲವಂತಾ
ತರಣಿಕುಲದ ಶ್ರೀ ರಾಮನಾಜ್ಞದಿಂದಾ
  ಬಹು ಸನ್ಮುದದಿಂದಾ
ಶರಧಿ ದಾಟಿ ಸೀತಾಮಾತೆಯ ತಾ ನೋಡಿ
  ಮನದೋಳ್ಗೋಳಾಡಿ
ದುರುಳ ರಾಕ್ಷಸಪುರವ ಸುಖನಿಗಿತ್ತಾ
  ಲೋಕಸಾಮರ್ಥಾ ೧

ಕುಂತಿಜಠರಾಂಭೋನಿಧಿ ಚಂದಿರನೇ
  ರಾಜಾಗ್ರೇಸರನೇ
ಕಂತುಜನಕನಿಚ್ಛಾನುಸಾರವಾಗಿ
  ರಣದಲಿ ಚೆನ್ನಾಗಿ

ನಿಂತು ಮಷ್ಟ ಮಯೋರ್ಘನಾದಿಗಳನು
ಸಂಹರಿಸಿದೆ ನೀನು
ಭ್ರಾಂತ ಜನರೇಸು ಬಲ್ಲರಯ್ಯ ನಿನ್ನಾ
ಬಹುಗುಣ ಸಂಪನ್ನಾ ೨

ನಡುಮನೆಯೆಂಬಾ ಬ್ರಾಹ್ಮಣನಾ ಮನೆಯಲ್ಲಿ
ಅವತರಿಸಿದೆ ಮುದದಲ್ಲಿ
ಮೃಡ ಸರ್ವೋತ್ತಮ ಹರಿಯೆ ತಾನೆಂದು
ವಿಶ್ವಂ ಮಿಥ್ಯವೆಂದು
ನುಡಿವ ಜನರುಗಳ ಮತಗಳನೆ ನಿರಾಕರಿಸಿ
ಸಚ್ಛಾಸ್ತ್ರ ರಚಿಸಿ
ಒಡೆಯ **ತಂದೆ ಶ್ರೀಪತಿವಿಠಲನ್ನ**
ಪೂಜಿಪ ರವಿಘನ್ನಾ ೩

## ೪

## ಸೋದಾಕ್ಷೇತ್ರ

**ಸೋದಾಕ್ಷೇತ್ರವೆ ದಿವ್ಯಕ್ಷೇತ್ರ**
ಬಂದ ಜನರಿಗಿಷ್ಟವನೀವ ಕ್ಷೇತ್ರ
ವಾದಿರಾಜರು ವಾದದಿಂದಲಿ
ವಾದಿ ವೀರಶೈವರ ಗೆದ್ದ ಕ್ಷೇತ್ರ ಪ

ಒಂದು ಭಾಗದಿ ರೂಪ್ಯಪೀಠ ಮ-
ತ್ತೊಂದು ಭಾಗದಿ ಸೋದಾಕ್ಷೇತ್ರ
ಕುಂದು ಎಳ್ಳಷ್ಟಿಲ್ಲದೆ ತೋರ್ಪಂದು
ಹರಿಭಕ್ತರಾದರಿಪಾ ಕ್ಷೇತ್ರ ೧

ಒಂದೇ ಸ್ಥಾನದಿ ಶ್ವೇತದ್ವೀಪ
ಮತ್ತೆ ವೈಕುಂಠಾನಂತಾಸನ

ಒಂದಾಗಿ ಶೋಭಿಸುತಿರುವಾ
ಚೆಂದವೇನೆಂದು ಪೇಳಲಿ ಮನವೆ ೨

**ರಾಜೇಶಹಯಮುಖ** ಚರಣ
ಕಂಜಮಧುಪನಂತಿರುವ ಶ್ರೀಭಾವಿ-
ಕಂಜಜಾತನ ಪದಕೇರುವ ವಾದಿ-
ರಾಜರಾಯರ ದಿವ್ಯಕ್ಷೇತ್ರ ೩

## ೫

## ಶ್ರೀ ವಾದಿರಾಜ ಚರಿತಸಾರ

(ರಾಗ-ಕಲ್ಯಾಣಿ; ಆದಿತಾಳ)

**ವಾದಿರಾಜ ಗುರುರಾಜ ನಮೋ**
ಸ್ವಾದಿನಿಲಯ ಸುರಗುರುವೆ ನಮೋ
ಮೋದತೀರ್ಥ ಮತಚಂದ್ರ ನಮೋ
ಸಾಧುರಕ್ಷಕ ಮುನೀಂದ್ರ ನಮೋ ೧

ಜನನ ವಿಲಕ್ಷಣನೆನಿಸಿದೆಯೊ ಗುರು
ಘನ ಮಹಿಮಾಬ್ಧಿ ಸುನಾಮ ನಮೋ
ಮುನಿಕರುಣವೆನುವ ಗೌರಿ-ರಾಮಾಚಾರ್ಯರ
ಮನಕಾನಂದದ ಭಾವಿಸಮೀರ ನಮೋ ೨

ಮುನಿ ವಾಗೀಶರ ದಯದಿ ಕುಸುಮ ಕೆರೆ
ವರ ದಂಪತಿಗೇ ಕುಮಾರನೆನಿಸೀ
ಘನ ಕೇದಾರದಿ ಜನಿಸೆ ಸತಿಪತಿಗ-
ಳರಿತರ್ಪಿಸಿ ರಕ್ಷಿಸಿದ ಮಹಾತ್ಮ ೩

ಅರಿತು ವಾಗೀಶರು ಕನಕಭಾಜನದಿ
ತರಿಸಿ ತೊಳಿಸೆ ಕರ ಮುಗಿದ ಶಿಶೋ
ಸುರರು ಕುಸುಮ ಮಳೆಗರೆಯೆ ಶ್ರೀಹರಿಯ
ಸ್ಮರಿಸಿ ಭೂವರಹನೆನುತ ಕರೆದ ಗುರೋ ೪

ಉಪನಯನದಿ ಮಂತ್ರೋಪದೇಶ ಸಹ
ನಿಪುಣರ ಸಂಸ್ಥಾನದಿ ನಿಲಿಸಿ
ಸುಫಲರ ಶ್ರೀವಾದಿರಾಜರೆನೆ ಗುರು
ಕೃಪಾಪಾತ್ರಗೆ ನಮೋ ನಮೋ ೫

ವ್ಯಾಸರಾಯರಲಿ ವಿಜಯೀಂದ್ರರ ಸಹ
ವಾಸವಾಗಿದ್ದ ಕಾಲದಲಿ
ಭಾಸುರರನು ನೃಪ ಕೃಷ್ಣರಾಯ ಸಂ-
ತೋಷದಿ ಪ್ರಸಂಗಾಭರಣರೆಂದ ಗುರು ೬

ವಾಲಿಭಂಡಾರದ ರಾಮವಿಠಲ ಶ್ರೀ-
ಲೋಲನ ಪೂಜಿಸಿ ಬಹು ಧನವ
ಮೌಳಿನೃಪನಿಗಿತ್ತು ಹರ್ಷಗೊಳಿಸಿ ಆ
ಕಾಲದಲರಸನ ಸೇವೆ ಸ್ವೀಕರಿಸಿದ ೭

ಮಧ್ವಸರಸ್ಸಿಗೆ ಸೋಪಾನ ಕನಕ
ಶುದ್ಧಾಭರಣದ ಶ್ರೀಕೃಷ್ಣನಿಗೆ
ಶ್ರದ್ಧೆಯೊಳರ್ಪಿಸಿ ನೃಪನನು ಬಹು ಪರಿ
ಶುದ್ಧಾತ್ಮನ ಮಾಡಿದ ಗುರುವೆ ನಮೋ ೮

ವ್ಯಾಸರಾಯರಿಂ ವ್ಯಾಸಮುಷ್ಟಿಕೆಯ
ತಾ ಸ್ವೀಕರಿಸೀ ರಜತಪುರದಲೀ
ಮೀಸಲ ಮನದಲಿ ಪೂಜಾಪದ್ಧತಿ
ತಾ ಸಲಿಸಿದ ಹರಿಸನ್ನಿಧಿಯುತ ಗುರು ೯

ದಶಪ್ರಮತಿಗಳಿಗೊಲಿದು ಪ್ರತಿಷ್ಠಿತ
ಶಿಶು ಶ್ರೀಕೃಷ್ಣ ಮಗಾರ್ ಬಲರಾ-
ಮ ಸುಧಾಸುರರಿಂ ಪೂಜಾಕ್ರಮ ಸಂ-
ತಸದಿ ಪದ್ಧತಿಯ ಗೈಸಿದ ಮುನಿವರ ೧೦

ವರ ದ್ವಾದಶಸ್ತೋತ್ರದಿ ಬಹು ವಿಷ
ಪರಿಹರವಹುದು ನಿಜವೆನುತರುಪಿ
ಸರಸದಿ ಸ್ತುತಿಸಿ ಶ್ರೀಕೃಷ್ಣನ ಪೂಜಿಸಿ
ನಿರವಧಿ ಮಹಿಮನೆಂದರುಹಿದ ಗುರೋ ೧೧

ಸೋನಗಾರನೋರ್ವ ಲೋಹವ ಕರಗಿಸಿ
ಗಣಪತಿ ವಿಗ್ರಹವನು ತೆಗೆಯೆ ಅದು
ಗುಣನಿಧಿ ಹಯಮುಖನಾಗುತಲವನಿಗೆ
ಕನಸಿನೊಳೊರೆದರ್ಪಿಸಲು ಪೂಜಿಸಿದೆ ೧೨

ಮಾಸದ್ವಯ ಪೂಜೆಯನೆರಡಬ್ದಕೆ
ತಾ ಸಮನಿಸಿ ಯತಿವರರಿಂ ನಡೆಸುತ
ಸಾಸಿರನಾಮನ ಒಲುಮೆಗೆ ಸಮಯವ
ಲೇಸು ಮಾಡಿ ನಿಲಿಸಿದ ಗುರುವರ ನಮೋ ೧೩

ಕೋಟ ಕೋಟೇಶ್ವರರ ಪರಸ್ಪರ ವಿರಸವ
ಕೂಟದಿ ಸೇರಿಸಿ ಮುದಗೊಳಿಸಿ
ನೋಟದೊಳಸ್ಪೃಶ್ಯರ ಹರಿಭಜನೆಯ
ಕೂಟದೊಳು ನಿಲಿಸಿ ಸಲಹಿದ ಯತಿವರ ೧೪

ಪುಣ್ಯಪುರದಿ ವಿದ್ವನ್ಮಣಿಗಳು ಬಹು
ಮಾನ್ಯ ರುಕ್ಮಿಣೀಶವಿಜಯವನು
ಘನ್ನವೆನ್ನುತಲಾನೆಯ ಮೇಲ್ಮೆರಸುತ
ಧನ್ಯರೆನಿಸೆ ಸನ್ಮಾನ್ಯರಾದ ಗುರೋ ೧೫

ಅಪ್ಪಾರೋಟಿಯ ರಕ್ಷಣೆಯಿಂದಿಹ
ದೃಶ್ಯವ ಕಂಡಜ್ಜರಿಯಲಿ ನಮಿಸಲು
ವಿಶ್ವವಂದ್ಯ ಸಲಹಿದ ಮ್ಲೇಚ್ಛರನು
ಅಶ್ವವದನನ ಕೃಪಾಪಾತ್ರರಾದ ಗುರು ೧೬

ಕಡಲೆ ಹೂರಣವ ಶಿರದಿ ಧರಿಸೆ ಹರಿ
ಸಡಗರದಿಂ ಪದವೆರಡು ಹೆಗಲ ಮೇಲೆ
ಇಡುತ ಮೆದ್ದಿಳಿಸೆ ಭುಂಜಿಸಿ ಸಂತಸ
ಪಡುತ ನಲಿಯುತಲಿ ಧ್ಯಾನಿಪ ಯತಿವರ ೧೭

ಪುರ ಪಂಢರಿಯಲಿ ಧನಿಕನ ಕ್ಷೇತ್ರದಿ
ಪರಮ ಹಯಾಸ್ಯನು ಮೆದ್ದುದರುಹೆ ಹರಿ
ಮರುದಿನ ಗಿಡದಿ ಕನಕ ಕಡಲೆ ಕಾಣಿಸೆ
ಹರಿಗರ್ಪಿಸೆ ಧನ್ಯನ ಮಾಡಿದ ಗುರು ೧೮

ಬಾದರಾಯಣರು ಬರುತ ಪ್ರಯಾಗದಿ
ವಾದಿರಾಜ ನಿಮ್ಮ ಬದರಿಗುಯ್ಯೆ ಸನ್ನ-
ಕಾದಿ ಮಧ್ವರನು ಕಂಡು ಕರ ಮುಗಿದು
ವೇದಾರ್ಥಗಳ ವಿಚಾರದಿ ಗ್ರಹಿಸಿದ ಗುರು ೧೯

ದ್ವಾರಕ ಕಾಶೀ ಕ್ಷೇತ್ರ ವಿಪ್ರರಿಗೆ
ತಾರಕ ಮಧ್ವಾಷ್ಟಕ ಪಠನದಿ ಜ್ವರ-
ವಾರಿಸಿ ತತ್ವಪ್ರಚಾರದಿ ಹರಿಯು ಅ-
ಪಾರ ಮಹಿಮನೆಂದರುಹಿದ ಕರುಣಿ ೨೦

ಗರುಡ ಮಾರುತಿ-ಪ್ರತಿಮೆ ಅಯೋಧ್ಯಾ
ಪುರದೊಳಿದ್ದುದನು ಕೃಷ್ಣಮಂದಿರದಿ
ಇರಿಸಿ ಪ್ರತಿಷ್ಠಿಸಿ ಸುರರು ಪೊಗಳುತಿರೆ
ಹರುಷದಿ ಪೂಜೆಯ ಕ್ರಮದಿ ನಡೆಸುತಿಹ ೨೧

ತನ್ನಯ ಶಿಷ್ಯನ ಉನ್ಮತ್ತತೆಗವ-
ನನ್ನು ಬ್ರಹ್ಮರಕ್ಕಸನೆನ್ನಿಸೆ
ಬೆನ್ನ ಬೀಳೆ ಭೂತನ್ನ ಮಾಡಿಕೊಂ-
ಡುನ್ನತ ಮಹಿಮೆಯೊಳ್ಮೆರೆದೆ ಮಹಾತ್ಮ ೨೨

ಋಣೆಯಾಗಿದ್ದುದ ಸ್ಮರಿಸಿ ಸಕಾಲದಿ
ಧನವ ಗಳಿಸಿ ಹರಿಭಕುತರಿಂದ
ತನುಮನ ಸೇವೆಯ ಸಲಿಸಿ ಗುರುವರಗೆ
ವಿನಯಮೂರ್ತಿ ಎನಿಸೆ ನಿಲಿಸಿ ಮೆರೆಸಿದೆ ೧೩

ಉರಗನ ಭಯಕಂಜುತ ಮೂಷಕ ಬರೆ
ಅರಿತಭಯಸಿತ್ತುರಗನ ಕ್ಷುಧೆಯನು
ಹರಿಸಿ ಕರ ಫಣದೊಳಿರಿಸೆ ಹರುಷದಿಂದ
ತೆರಳುವಂತೆ ಮಾಡಿದ ಗುರುವೆ ನಮೋ ೧೪

ಭೂತಕ್ಷೇತ್ರ ತನ್ನಾಥನದೆನಿಸುತ
ಜಾತಿನೀತಿಯರಿತನ್ನದಾನದಲಿ
ಖ್ಯಾತಿಮಹಂತರ ವಚನವೆ ಸತ್ಯವು
ಈ ತೆರ ಸಂತತವಿರುವಂತೆಸಗಿದೆ ೧೫

ಕುಮಾರಧಾರಾ ನೇತ್ರಾವತಿ ಸಂ-
ಗಮದೀ ದಂಡತೀರ್ಥವ ರಚಿಸೀ
ಉಮಾಪತಿಗೆ ಅಭಿಷೇಕವ ಗೈಸಿದ
ಸಮೀರಪದ ಭಕುತರ ಪಾಲಿಸುವೆ ೧೬

ಸ್ವಚ್ಛ ಮಹಿಮರಿಗೆ ಪಚ್ಚೆವಿಟ್ಠಲನ
ಸ್ವೇಚ್ಛೆಯೊಳರ್ಪಿಸಿ ಪೂಜಿಸುತ
ಮತ್ಸರವಿರಹಿತ ಜೈನ ನೃಪತಿಯನು
ಮೆಚ್ಚಿ ಭಕುತನೆನಿಸಿದೆ ಗುರುಮುನಿಯೆ ೧೭

ಋಣದಾರಿದ್ರ್ಯವು ಕುಷ್ಟರೋಗಗಳು
ಘನ ಮೃತ್ತಿಕೆಯಿಂದ ಪರಿಹರವು
ಜನರನುಭವ ಕಾರಣ ಗುರುಭಕ್ತಿಯು
ಘನ ಮಂತ್ರಪಠಣ ಲೇಸೆನುತರುಹಿದೆ ೧೮

ಅನುಜನು ಪಿತೃಸೇವಾರತನಾಗಿ-
ದ್ದನು ದಯದಲಿ ಸನ್ಯಾಸವ ಬಯಸಲು
ಘನತರ ಭಂಡಾರಕೇರಿಮಠಕಧಿಪರು
ಮುನಿಯು ಸುರೋತ್ತಮತೀರ್ಥರೆನಿಸಿದ ೨೯

ಹರಕೆ ಮಾತೆಯದು ಸಲಿಸೆ ಭಾರತಕೆ
ಬರೆದ ವ್ಯಾಖ್ಯಾನ ಲಕ್ಷಾಭರಣ
ಮುರಮಥನಿಗರ್ಪಿಸಿ ಸಂತೈಸಿದ
ಅರವಿದೂರರನು ಪೊಗಳಲಳವೆ ಗುರೋ ೩೦

ದುರುಳರು ಪಾಚಕರಿಗೆ ಬೋಧಿಸುತಲಿ
ಗರಳ ಬೆರಸಿದ್ದೂರಣವರ್ಪಿಸಲು
ಹರಿಯು ಭುಂಜಿಸಿ ಗರಳಗೊರಳನಾ
ಗಿರುತಿಹನೀಗಲು ಸಾಕ್ಷಿಯಹುದಿದಕೆ ೩೧

ಮತಿಭ್ರಷ್ಟರಹಿತರಾಗೆ ಸ್ವಕ್ಷೇತ್ರದಿ
ಪತಿತ ವಿಪ್ರರಿಂ ಬೆಳೆಸಿದ ಗುಳ್ಳವ-
ನತಿಭಕ್ತಿಯೊಳರ್ಪಿಸೆ ಸ್ವೀಕೃತವಹು-
ದತುಳ ಗರಳಹರವೆನಿಸಿದ ಗುರುವರ ೩೨

ವೇಲಾಪುರದಲಿ ಚನ್ನಕೇಶವನು
ಮೇಲು ರಥದಿ ಬರೆ ಕಾಣುತ ಶ್ರೀ-
ಲೋಲನ ಸ್ತುತಿಸೆ ವೈಕುಂಠದಾಸರಾ-
ವೇಳೆ ನಮಿಸೆ ಬಹು ಮಹಿಮೆಯ ತೋರಿದೆ ೩೩

ಹಯದರ್ಶನವಿತ್ತಾಕೃಷಿಕನಿಗೆ ಸು-
ನಯನದಿ ಕನಕನ ಮನವನು ಒಂದೆನಿಸೆ
ದಯಗೊಳಿಸಿ ಹರಿಯ ಪರಿಪರಿ ಭಜಿಸುತ
ಹಯವದನನಿಗೆ ಮಂಗಳ ಪಾಡಿದ ಗುರು ೩೪

ತತ್ತ್ವವಿಚಾರದಿ ಕೊಲ್ಹಾಪುರದಿ
ಕ್ಷೇತ್ರ ಚರಿಸಿ ತಿರುಪತಿಶ್ರೀಲೋಲನ
ಗಾತ್ರ ಮರೆತು ಸ್ತುತಿಸಿದ ಸೇವಕನೆಂದುತ್ತಮ
ಪುರುಷೋತ್ತಮನ ದಾಸವರ ೩೫

ಆಪಾದಶಿರ: ಸಾಲಿಗ್ರಾಮದ ಸರ
ಶ್ರೀಪತಿಗರ್ಪಿಸಿ ಸೇವಿಸುತ
ಆ ಪರಮನ ಕೃಪಾಪಾತ್ರರಾಗಿ ಮತ್ತಾ
ಪರಮೇಷ್ಠಿಯ ದತರ್ಹ ಗುರುವರ ೩೬

ಸಿರಿಕೃಷ್ಣನ ಪರ್ಯಾಯ ನಾಲ್ಕರಲಿ
ಪರಿಪರಿ ಪೂಜಿಸಿ ವಿಭವದಲಿ
ಚರಿಸಿ ಭೂವಲಯ ಕ್ಷೇತ್ರಗಳಲಿ ಮತ
ವಿರಿಸಿ ಪದ್ಮನಾಭನನರ್ಚಿಸಿದ ಮುನಿ ೩೭

ಇಂದಿರೇಶನತಿ ಸುಂದರಾಶ್ವಮುಖ
ನೆಂದಿಗು ಹೃನ್ಮಂದಿರದಿ ಧ್ಯಾನಿಪಾ-
ನಂದ ಶರಧಿಯೊಳಗೀಸುತಿರುವ ಬಹು
ಸುಂದರ ಯತಿವರ ಭಜಕರ ಪೊರೆಯುವ ೩೮

ಪಾಜಕ ಕ್ಷೇತ್ರದಿ ಮಧ್ವರ ಪ್ರತಿಮೆಯ
ಪೂಜಿಸೆಮಂದಿರ ರಚಿಸಿ ಪ್ರತಿಷ್ಠಿಸಿ
ಮೂಜಗದೊಳಗಚ್ಚರಿಯ ಸದ್ಗ್ರಂಥ ನಿರ್-
ವ್ಯಾಜ ಭಕುತಿಯಲಿ ರಚಿಸಿ ಮೆರೆದ ಗುರು ೩೯

ಅರಸಪ್ಪನ ಅಳಿಯನ ಮೃತಿಯ ತಪ್ಪಿಸಿ
ಉಳಿಸಲು ಸ್ವಾದಿಯ ದಾನವಿತ್ತು ಬಹು
ಸರಳವಾಗಿ ಭವ್ಯ ಸೇವೆ ಸಲ್ಲಿಸಲು
ಹರಿಯ ನಿಲಿಸಿ ಕ್ಷೇತ್ರವೆನಿಸಿ ರಾಜಿಪ ೪೦

ಅಂಧತೆಯಲಿ ಶ್ರೀಕೃಷ್ಣನ ದರ್ಶನ-
ಕೆಂದು ಬಂದೊಡನೆ ಕಂಡು ಮನದಣಿಯೆ
ವಂದಿಸಿ ಸ್ತುತಿಸುತ ಸ್ವಾದಿಗೆ ಮರುಳುತಾ-
ನಂದತೀರ್ಥರನು ಸ್ಮರಿಸಿದ ಗುರುವರ ೪೧

ವೇದವೇದ್ಯರನು ಪೀಠದಿ ನಿಲಿಸುತ
ಮೋದದಿ ಕೃಷ್ಣನ ಸೇವೆ ಸಲಿಸುತ
ಮೇದಿನಿ ಸುರರನು ಮುದಗೊಳಿಸಿ ಹರಿ
ಬಾದರಾಯಣರ ಸ್ಮರಿಸಿ ನಮಿಸಿದೆ ೪೨

ಬದರಿಕಾಶ್ರಮಕೆ ಕಳಿಸಿ ಭೂತರಾಜನ
ಮುದದಿ ತ್ರಿವಿಕ್ರಮ ಮೂರ್ತಿಯ ತರಿಸಿ
ಸದನವ ಸೇವೆಗೆ ನೃಪನು ವಿರಚಿಸಿರೆ
ಅಮೃತೋತ್ಸವ ನಡೆಸಿ ಹರುಷಿಸಿದೆ ೪೩

ಉತ್ತರ ಭಾಗದಿ ದಿವ್ಯಸರಃ ಸ್ಥಿತ
ಕರ್ತೃಭೂತ ನಾರಾಯಣ ಭಕ್ತನ
ನಿತ್ಯ ಸೇವೆ ಧನಗಳಿಸೆ ಹರಿಕೃಪಾ
ಪಾತ್ರನ ಮಾಡಿಸಿ ಪೊರೆಯುತಲಿರುವ ೪೪

ಕಲಿಪರಮಾವಧಿ ವಿಂಶಮಸಮ ಸಮ
ಸಲಿಸಿ ಸೇವೆ ಹರಿಗುರು ಜನ ಸುಜನರ
ಕಲುಷದೂರನೆನಿಸಿ ಹರುಷಗೊಳಿಸೀ
ವಿಲಸಿತ ಭೂವಲಯದಿ ಮೆರೆಯುತಲಿರುವ ೪೫

ಬೃಂದಾವನ ಪಂಚಕವು ತ್ರಿಮೂರ್ತಿಗಳಿಂದ
ವಾಯು ಮತ್ಸ್ಯಾದಿಗಳಿಂದ ಶೋ-
ಭಿಸೆ ಸುರೇಂದ್ರದೂತರಿಗೆ ಒಂದೆರಡು
ದಿನದಿ ಬರುವೆವೆನುತ ಅರುಹಿದೆ ೪೬

ಬೃಂದಾವನಯಾತ್ರೆಯೆ ಮಹಾಯಾತ್ರೆಯು
ಎಂದು ತಿಳಿದು ಸುಜನರು ಸತತ
ಬಂದು ನಿಂದು ಉತ್ಸವದಿ ಪ್ರಸಾದವ
ಪೊಂದೆ ಜನುಮ ಸಫಲವೆಂದು ಅರುಹಿದೆ ೪೭

---

**ಟಿಪ್ಪಣಿ :**

ನುಡಿ ೧೧ : ದ್ವಾದಶಸ್ತೋತ್ರಪಠನದಿಂದ ವಿಷಪರಿಹಾರ ವಾಗುವ ಮಾತಿದೆ. ಅದಾವ ಸಂದರ್ಭವಿದು?

ನುಡಿ ೩೪, ೩೫ : ಇವುಗಳ ಭಾವ ಸ್ಪಷ್ಟವಾಗಿ ತಿಳಿಯದು.

ನುಡಿ ೪೧ : ಶ್ರೀ ವಾದಿರಾಜರು ಕೃಷ್ಣದರ್ಶನ ಪಡೆಯಲೆಂದು ಉಡುಪಿಗೆ ಬಂದಾಗ, ಅಂಧತ್ವದಲ್ಲಿ ಅದು ಕೈಗೂಡಲಿಲ್ಲೆಂದು ಪರಿತಪಿಸಿದ ಸಂದರ್ಭ ಇಲ್ಲಿದೆ.
ಅದರ ಮೂಲ ಈ ಶ್ಲೋಕದಲ್ಲಿದೆ :

**ಯದಿ ದಿಶಸಿ ನಯನ ಪಟು ತಾಂ**
**ತರ್ಹಿ ಭವಚ್ಚರಣಕಮಲ ಸೇವಾಯೈ**
**ಆಯಾಸ್ಯಾಮಿ ದಯಾಳೊ ಕೃಷ್ಣ**
**ನ ಚೇತ್ ಪೂಜಯಾಮಿ ಕಥಮ್ ಅಂಧಃ**

## ೬

## ದೇವತೆಗಳ ಹಾರೈಕೆ

### (ಶ್ರೀ ವಾದಿರಾಜರು ಹೇಳಿದಂತೆ)

ಬಾಳು ಬಾಳು ಹರಿಪೂಜಾಲೋಲುಪ
ಬಾಳೊ ಬಾಳೊ ಮುನಿವಾದಿರಾಜಾ
ಬಾಳೆಂದಕ್ಷತಿನಿಟ್ಟು ದೇವಕ್ಕಳೆಲ್ಲ
ಬಲು ಕೃಪೆಯಲಿ ಹರಸಿದರೊ ಪ.

ಮಕ್ಕಳ ಮ್ಯಾಲೆಂದೆಂದು ಬಲು
ಅಕ್ಕರುಳ್ಳ ತಾಯಿಬಳಗಾ
ಅಕ್ಷತಿನಿಕ್ಕಿ ಹರಸುವಂದದಿ ದೇ
ವಕ್ಕಳಿನ್ನು ಹರಸಿದರೊ ೧

ಸಾಲಗ್ರಾಮ ತೀರ್ಥವನು ಮ್ಯಾಲೆ
ಫಲವೀವ ಕ್ಷೇತ್ರವನು
ಕಾಲಕಾಲದಿ ಹರಿಸ್ಮರಣೆಯ ಬಿಡದಿರು
ಕೀಳು ಭವವೆಂಬ ಶತ್ರುವನು ೨

ತುಲಸಿ ಪದ್ಮಾಕ್ಷಿಯ ಸರವಾ ನಿನ್ನ
ಕೊರಳರವದಲ್ಲಿ ಮೆರೆವಾ
ಅಲಸದೆ ಹರಿವಾಸರವನೆ ಬಿಡದಿರು
ಸುಲಭದಿ ಹರಿ ನಿನ್ನ ಪೊರೆವ ೩

..................................

ಹಯವದನಗ ನಮಿಸುತಿರು ನಿ-
ರ್ಣಯದ ಶ್ರುತಿಯ ಸೇವಿಸುತಿರು
ಪ್ರಿಯ ಪುರಾಣಗಳ ಕೇಳುತಿರು ನಿ-
ರ್ಭಯದಿಂದವನ ಪೊಗಳುತಿರು ೫

---

## ೭

(ರಾಗ–ಹಂಸನಂದಿನಿ; ಛಾಪುತಾಳ)

**ಜನ್ಮ ಸಫಲ ಕಾಣಿರೋ**
ನಮ್ಮ ಗುರು ವಾದಿರಾಜರಾಯರ ಕಂಡು ಪ

ಯುಕ್ತಿಮಲ್ಲಿಕೆಯೆಂಬ ಗ್ರಂಥ ಮಾಡಿಹರು
ಮತ್ತೆ ಮುತ್ತಿನ ಸಿಂಹಾಸನವನೇರಿಹರು
ಮತ್ತದುರ್ವಾದೀಭಗಳಿಗೆ ಮೃಗೇಂದ್ರರು
ಸೂತ್ರನಾಮದಿ ಮುಂದೆ ಮೆರೆವರು ೧

ವ್ಯಾಸ ಕೂಟಗಳಲ್ಲಿ ಶ್ರೇಷ್ಠರಾಗಿಹರು
ದಾಸ ಕೂಟಗಳಲ್ಲಿ ರತ್ನದಂತಿಹರು
ಭಾಸುರ ಕಾಯದಿ ನೂರಿಪ್ಪತ್ತು
ವರ್ಷ ಧರೆಯೊಳಗೆ ಮೆರೆದವರು ೨

ಮೂಜಗದೊಳಗಿಂಥ ಗುರುಗಳೆಲ್ಲಿಹರು
ಕಂಜಸುತನ ಪದವೇರುವರು
**ರಾಜೇಶಹಯಮುಖನ** ಕಿಂಕರಾಗ್ರಣಿಗಳು
ರಾಜಿಪ ಶ್ರೀಸೋದೆಪುರದಲಿಹರು ೩

## ೮

(ರಾಗ–ಆನಂದಭೈರವಿ; ಅಟ್ಟತಾಳ)

**ಭಾವಿಸಮೀರ ಶ್ರೀ ಗುರುವಾದಿರಾಜ ನಿನ್ನ**
ಸೇವಿಪ ಜನರಿಗಭೀಷ್ಟವನೀವ ಪ

ಹನುಮ ಭೀಮ ಮಧ್ವರೊಡಗೂಡಿದ ವೃಂದಾ-
ವನದೊಳು ಮೆರೆಸುವ ಮುಂದಿನ ಸೊಬಗಾ ೧

ಪಂಥದಿ ವೀರಶೈವರ ಗುರುವನೆ ಗೆದ್ದು
ಪತ್ತಿದೆ ದಿವ್ಯಮುತ್ತಿನಾ ಪೀಠವನು ೨

ಕುಂಡಿನೇಶನ ತನುಜಾತೆಯ ಪತ್ರವ
ಪುಂಡರೀಕಾಕ್ಷನಿಗರ್ಪಿಸಿದಂಥ ೩

ಮದುವೆಯ ಸಮಯದಿ ಖಪಥದಿಂದಲಿ ಬಂದು
ವಧುವಿನ ಭಾಗ್ಯವನುಳಿಸಿದ ಗುರುವೇ ೪

ಅರಿತುಂಡ ವಿಷವನು ಅರಗಿಸಿಕೊಂಡೆ
ನರಪತಿ ತನಯನ ಬದುಕಿಸಿ ಬಂದೆ ೫

ಭಜಿಸುತ **ರಾಜೇಶ ಹಯಮುಖ**ನಂಘ್ರಿಯ
ತ್ರಿಜಗದೊಳಧಿಕ ಸೋದಾಪುರದಲಿ ನಿಂದ ೬

## ೯

**ರಾಜರ ಭಾಗ್ಯವಿದು ವಾದಿರಾಜರ ಭಾಗ್ಯವಿದು**
ಸ್ವಾದಿರಾಜರ ಭಾಗ್ಯವಿದು ಪ.

ರಾಜರ ಭಾಗ್ಯವನೆಂತು ವರ್ಣಿಪೆನು ನಾ
ವಾಜಿವದನನ ಸದಾ ಪೂಜಿಪ ಭಾಗ್ಯವು ೧

ಐದು ಪರ್ಯಾಯದಿ ಕೃಷ್ಣನ ಪೂಜೆಯ-
ನಾದರದಲಿ ರಚಿಸಿದ್ದರ ವಿಭವವಿದು ೨

ಸುರರ ವಿಮಾನವ ತಡೆದು ನಿಲ್ಲಿಸಿದ
ಮರುತನ ಪದವ ಮುಂದೇರುವ ಭಾಗ್ಯವು ೩

